# A SHORT
# GRAMMAR
OF THE
## ANCIENT DIALECT
OF THE
# CANARESE LANGUAGE

PREPARED BY ORDER OF THE DIRECTOR OF PUBLIC INSTRUCTION.

ಹಳೆ ಕನ್ನಡದ

ಸಂಕ್ಷೇಪ

# ವ್ಯಾಕರಣ ಸೂತ್ರಗಳು.

MANGALORE:
GOVERNMENT SCHOOL-BOOK DEPOT.
1866.

# A SHORT GRAMMAR OF THE ANCIENT DIALECT OF THE CANARESE LANGUAGE

PREPARED BY ORDER OF THE DIRECTOR OF PUBLIC INSTRUCTION.

# ಹಳೆ ಕನ್ನಡದ ಸಂಕ್ಷೇಪ ವ್ಯಾಕರಣ ಸೂತ್ರಗಳು.



MANGALORE:
PRINTED BY PLEBST & STOLZ, BASEL MISSION PRESS.
1866.

# ಹಳೆ ಕನ್ನಡದ ಸಂಕ್ಷೇಪ ವ್ಯಾಕರಣಸೂತ್ರಗಳು
ಅಂದರೆ
## ಈಗಿನವರ ಪ್ರಯೋಗದಲ್ಲಿ ವ್ಯವಹರಿಸದಂಥಾ ಗ್ರಂಥ ಪ್ರಯೋಗದ ರೂಪವಿಧಿಗಳ ವಿವರವು.

## I. (LETTERS) ಸಂಜ್ಞಾಪ್ರಕರಣ.

1. ಬೆರಲು, ಎರಲು (ಘಾಳಿ), ಒರಲು, ಕೊರಲು, ಅರಲು (ಹೂವು), ಸರಲು (ಬಾಣ), ಪರಲು, ಮರಲು, ನರಲು, ಮುಂಗೈಸರಲು ಎಂಬೀ ಲಕಾರಾಂತ ಶಬ್ದಗಳನ್ನ ಗ್ರಾಮ್ಯರು ತಿಳಿಯದೆ ಕುಳಾಂತ (ಳಕಾರ) ಭ್ರಮೆಯಿಂದ ಉಚ್ಚರಿಸುವರು; ಇದು ಸಲ್ಲದು. About the letters ಲ ಳ.

ಪ್ರಯೋಗ:

ನರಲು=ನರಳ್ಳು, ಕೊರಲು=ಕೊರಳ್ಳು, ಸರಲು=ಸರಳ್ಳು.

2. ಮರಲ್, ಅರಲ್, ಎರಲ್ ಎಂಬೀ ಮೂರು ಶಬ್ದಗಳ ಮಧ್ಯ ರೇಫೆಗೆ ಲಕಾರವಾಗಿ, ಅಂತ್ಯ ಲಕಾರಕ್ಕೆ ರೇಫೆಯಾಗಿ, ಮಲರ್, ಅಲರ್, ಎಲರ್ ಎಂದು ವಿಕಲ್ಪದಿಂದ ಆಗುವದು. ಅದಲ್ಲದೆ ಮರಲ್ ಎಂಬುವದರ ರೇಫೆಗೆ ಣಕಾರವಾಗಿ, ಮಣಲೆಂದು ಉಂಟು. Change of letters.

3. ಯಕಾರ, ರೇಫ, ಲಕಾರ, ಣಕಾರ, ನಕಾರ, ಳಕಾರಗಳು ಕನ್ನಡದಲ್ಲಿ ಪದಗಳ ಕಡೆಯೊಳಗೆ ಬಹಳವಾಗಿ ವ್ಯಂಜನವಿಧಿಯನ್ನು ಧರಿಸುವವು. ಈ ವ್ಯಂಜನಾಂತ ಶಬ್ದಗಳನ್ನ ತಿಳಿದು ಕವಿತ್ವದಲ್ಲಿ ಪ್ರಯೋಗಿಸುವವರಿಗೆ ತೊಡಕಿಲ್ಲ. Words terminating in consonants.

ಪ್ರಯೋಗ:

ಯಕಾರಕ್ಕೆ: ಕೈಯ್=ಕೈಯು, ಬಾಯ್=ಬಾಯು, ಹಾಯ್. ಮುಂ.
ರೇಫೆಗೆ: ನಾರ್=ನಾರು, ಬೇರ್=ಬೇರು, ತೇರ್=ತೇರು.
ಲಕಾರಕ್ಕೆ: ಪಾಲ್=ಹಾಲು, ತೋಲ್ (ದಾರಿ)=ತೋಲು.
ಣಕಾರಕ್ಕೆ: ನಾಣ್=ನಾಣು, ಜಾಣ್=ಜಾಣ, ಪವಣ್.
ನಕಾರಕ್ಕೆ: ಸೀನ್=ಸೀನು, ಪೂನ್=(ಅಡ್ಡಿ ಮಾಡುವದು)=ಪೂನು.
ಳಕಾರಕ್ಕೆ: ಮಿದುಳ್=ಮಿದುಳು, ಕರುಳ್=ಕರುಳು, ಕುರುಳ್.

ಪ like ಹ.

4. ಕರ್ಣಾಟಕ ಶಬ್ದದ ಪಕಾರಕ್ಕೆ ವಿಕಲ್ಪದಿಂದ ಹೊಸಗನ್ನಡದಲ್ಲಿ ಹಕಾರವಾಯಿತು. ಪಕಾರದ ದ್ವಿತ್ವದಲ್ಲಿ ಇದನ್ನು ಮಾಡಲಾಗದು.

ಪ್ರಯೋಗ:

ಹಕಾರಕ್ಕೆ: ಪಾಸು=ಹಾಸು; ಪೋಪ=ಹೋಹ. ಇದು ದೇಶಿಯಲ್ಲಿ ಚೆಲುವು.
ದ್ವಿತ್ವ ಇಲ್ಲದಕ್ಕೆ: ಹೆಪ್ಪು=ಹೆಹು ಎಂದು ಮಾಡಲಾಗದು; ತಪ್ಪು ಮುಂ.
ಇದಕ್ಕೆ ಅಪವಾದಗಳು: ಅಪ್ಪ, ಅಹ (ಆಗುವ); ತರ್ವ, ತರ್ಪ, ತಪ್ಪ, ತಹ; ಬರ್ವ, ಬರ್ಪ, ಬಪ್ಪ, ಬಹ (ಬರುವ); ಇರ್ವ, ಇರ್ಪ, ಇಪ್ಪ, ಇಹ. ಈ ರೂಪಗಳೆಲ್ಲ ಗ್ರಂಥಗಳಲ್ಲಿ ವರ್ತಿಸುವವು.

An exception to the above rule.

5. ಗಡ ಎಂಬ ಶಬ್ದದ ಅರ್ಥವಾದಲ್ಲಿ, ಅಂತಪ್ಪಂ, ಇಂತಪ್ಪಂ, ಉಂತಪ್ಪಂ, ಎಂತಪ್ಪಂ ಎಂಬಿವಕ್ಕೆ ಹಕಾರವಾಗುವದು. ಮತ್ತು ಅಂತಹಂ, ಇಂತಹಂ, ಉಂತಹಂ, ಎಂತಹಂ ಎಂಬಿವುಗಳ ಸ್ಥಾನಕ್ಕೆ ವಿಕಲ್ಪದಿಂದ ಅಂನಂ, ಇಂನಂ, ಉಂನಂ, ಎಂನಂ ಎಂದು ಆಗುವದು.

ಪ್ರಯೋಗ:

ಅಂನಂ ಎಂಬುದಕ್ಕೆ: ಸಿಡಿಲಂನಂ=ಸಿಡಿಲಂಥವನು.
ಇಂನಂ ಎಂಬುದಕ್ಕೆ: ದಿನಕರಂ ಎಂನಂ ಇಂನಂ=ದಿನಕರನು ಎಂಥವನೊ ಅಂಥವನು.

6. ಮ ನ ಕಾರಗಳ ಮುಂದೆ ವ್ಯಂಜನಾಕ್ಷರ ಬಂದರೂ, ಇಲ್ಲದಿದ್ದರೂ, ಅವುಗಳಿಗೆ ಬಿಂದುವಾಗುವದು. ಆ ಬಿಂದುವಿಗೆ ಇದಿರಾಗಿ ವರ್ಗಾಕ್ಷರ ಬಂದರೆ, ವಿಕಲ್ಪದಿಂದ ಆ ವರ್ಗದೈದನೆಯಕ್ಷರವಾಗುವದು. ಮ and ನ changed.

## ಪ್ರಯೋಗ:

ಮಕಾರಕ್ಕೆ: ಆಮ್ ಸುಖಿಗಳ್=ಆಂ ಸುಖಿಗಳ್.
ನಕಾರಕ್ಕೆ: ಆನ್ ವಾದಿ=ಆಂ ವಾದಿ.
ವ್ಯಂಜನ ಶೂನ್ಯಕ್ಕೆ: ಆಂ, ನೀಂ, ತಾಂ.
ವರ್ಗಪಂಚಮಕ್ಕೆ:
ಕವರ್ಗಕ್ಕೆ: ಅವಂ ಕಡುಗಲಿ=ಅವಙ್ಕಡುಗಲಿ.
ಚವರ್ಗಕ್ಕೆ: ಅವಂ ಚಲವಾದಿ=ಅವಞ್ಚಲವಾದಿ.
ಟವರ್ಗಕ್ಕೆ: ಅವಂ ಟಕ್ಕಂ=ಅವಣ್ಟಕ್ಕಂ.
ತವರ್ಗಕ್ಕೆ: ಕೆಂದಳಿರ್=ಕೆನ್ದಳಿರ್.
ಪವರ್ಗಕ್ಕೆ: ಕೆಂಮಣ್ಣು=ಕೆಮ್ಮಣ್ಣು.

ಆದರೆ ಮ ನ ಕಾರಗಳಿಗೆ ಸ್ವರಾಕ್ಷರ ಇದಿರಾದಲ್ಲಿ, ಬಿಂದುವಾಗುವದಿಲ್ಲ. ಪದಮಧ್ಯದಲ್ಲಿ ಜನರ್ ಇದಂ ಅರಿದು ಅಂತ ಬರೆಯದೆ ಜನರಿದನರಿದು ಅಂತ ಬರೆಯ ಬೇಕು. ಯಾಕಂದರೆ ಪದಮಧ್ಯದಲ್ಲಿ ಬರೆ ಸ್ವರಾಕ್ಷರ ಬರೆಯದೆ, ಅದನ್ನು ಯಾವಾಗಲು ಹಿಂದುಗಡೆಯಲ್ಲಿಯ ವ್ಯಂಜನಕ್ಕೆ ಕೂಡಿಸಿ ಬರೆಯ ಬೇಕೆಂಬುವದು ಕಾವ್ಯ ಬರೆಯುವ ಪದ್ಧತಿ.

## ಪ್ರಯೋಗ:

ಬಿಂದುವಾಗದಕ್ಕೆ: ಆಮ್ ಉಸುರ್ವೆವು. ಆನ್ ಆಂಪೆನ್.
ಪದಮಧ್ಯದಲ್ಲಿ ಬರೆ ಸ್ವರಾಕ್ಷರ ಬಾರದಕ್ಕೆ: ಪೇಳ್ದವನೊಳಾವದೂಣಯಂ! (ಪೇಳ ವನೊಳ್ ಆವದು).

7. ಬಿಂದುವಿಗೆ ಬಂದದಲ್ಲದ ನಿಜ ಮಕಾರದ ಸ್ಥಾನಕ್ಕೆ ವಕಾರ ಬರುವದು. ಮ changed into ವ.

ಪ್ರಯೋಗ:

ತಾಮರೆ=ತಾವರೆ (ಕಮಲ); ಸಾಮಂತಂ=ಸಾವಂತಂ (ನಾಡ ಒಡೆಯ); ತಮಿಳ್=ತವಿಳ್; ತೆಮರ್=ತೆವರ್; ಸಾಮಿ=ಸಾವಿ.

ನ changed into ಣ. 8. ಭಿನ್ನ ಪದದಲ್ಲಿಯೂ ಸಮಾಸದಲ್ಲಿಯೂ ಣಕಾರಕ್ಕೆ ಪರವಾದ ನಕಾರವು ಣಕಾರವಾಗುವದು.

ಪ್ರಯೋಗ:

ಭಿನ್ನಪದಕ್ಕೆ: ಕಣ್ ನೊಂದಪುದು=ಕಣ್ ಣೊಂದಪುದು.
ಸಮಾಸಕ್ಕೆ: ಕಣ್ ನೀರ್=ಕಣ್ಣೀರ್; ತಣ್ ನೆಳಲ್=ತಣ್ಣೆಳಲ್.

ವ, ಯ, ಅ changed into ಔ, ಐ, ಒ. 9. ಪದಮಧ್ಯದ ವಕಾರ ಯಕಾರಗಳಿಗೆ ಔಕಾರ ಐಕಾರಗಳ ವಿಧಿ ಪ್ರಾಪ್ತಿಸುವದು. ಅಕಾರಾಂತಕ್ಕೆ ಹ್ರಸ್ವ ಒಕಾರ ಬರುವದು. ಆದರೆ ಈ ಮೂರರಲ್ಲಿ ವಿಕಲ್ಪ ಉಂಟು.

ಪ್ರಯೋಗ:

ಔಕಾರಕ್ಕೆ: ಕವುಂಕು=ಕೌಂಕು (ಅಪ್ಪಿ ಕೊಳ್ಳುವದು); ಅವುಂಕು=ಔಂಕು (ಹಿಚಗು); ಅವುತಣ=ಔತಣ.
ಐಕಾರಕ್ಕೆ: ಕಯಿವಾರ=ಕೈವಾರ; ಅಯ್ಯ=ಐಯ.
ಒಕಾರಕ್ಕೆ: ಆವಂ=ಆವೊಂ, ನುಡಿದಂ=ನುಡಿದೊಂ.

---

## II. (EUPHONY) ಸಂಧಿ ಪ್ರಕರಣ.

General rules ಸ್ವರ ಸಂಧಿ. 10. ಸ್ವರಾಕ್ಷರ ಪರವಾದರೆ, ಸಂಸ್ಕೃತದ ಮತ್ತು ಕನ್ನಡದ ವಿಭಕ್ತಿಯ ಸ್ವರಕ್ಕೂ ಪ್ರಕೃತಿಯ ಸ್ವರಕ್ಕೂ ನಾಮರೂಢಿ ಅಳಿಯದ ಪಕ್ಷದಲ್ಲಿ, ಲೋಪವಾಗುವದು.

ಪ್ರಯೋಗ:

ಸಂಸ್ಕೃತದ ವಿಭಕ್ತಿ ಸ್ವರಲೋಪಕ್ಕೆ: ಕ್ರಮದೆ ಆಯಿತು=ಕ್ರಮದಾಯಿತು.

ಸಂಸ್ಕೃತ ಪ್ರಕೃತಿ ಸ್ವರಲೋಪಕ್ಕೆ: ದೇವ ಎಂಬರ್=ದೇವೆಂಬರ್; ಮನ+ಎಂಬ+ಭೃಂಗ=ಮನೆಂಬ ಭೃಂಗ. ರಾಗ+ಇಸು=ರಾಗಿಸು; ಭಾವ+ಇಸು=ಭಾವಿಸು.

ಕರ್ಣಾಟಕ ವಿಭಕ್ತಿ ಸ್ವರಲೋಪಕ್ಕೆ: ಪೊಲದಲ್ಲಿ+ಇರ್ದಂ=ಪೊಲದಲ್ಲಿರ್ದಂ.

ಆಖ್ಯಾತ ವಿಭಕ್ತಿ ಸ್ವರಲೋಪಕ್ಕೆ: ಮಾಡಿದೆವು+ಒಳ್ಪಂ=ಮಾಡಿದೆವೊಳ್ಪಂ.

ಕರ್ಣಾಟಕ ಪ್ರಕೃತಿ ಸ್ವರಲೋಪಕ್ಕೆ: ಮರ+ಎಂಬ+ರಥಂ=ಮರೆಂಬರಥಂ.

ಸಂಸ್ಕೃತ ಕರ್ಣಾಟಕದ ಪ್ರಕೃತಿ ಸ್ವರಲೋಪವಿಲ್ಲದಕ್ಕೆ: ವಿಧು+ಇದು=ವಿಧುವಿದು. ವಿಧಿದು ಅಂತ ಮಾಡಲಾಗದು; ಮನೆ+ಇರ್ಪುದು=ಮನೆಯಿರ್ಪುದು. ಮನಿರ್ಪದು ಅಂತ ಮಾಡಲಾಗದು. ಯಾಕಂದರೆ ವಿಧಿಯೊ ವಿಧುವೊ ಮನೆಯೊ ಮನವೊ ಎಂಬಂತೆ ಅನುಮಾನ ಉಳಿಯುತ್ತಿತ್ತು, ನಾಮರೂಢಿ ಕೆಡುತ್ತಿತ್ತು.

11. ಷಷ್ಟಿಯ ಅಕಾರವು ಹಿಂದಿದ್ದರೆ, ಮತ್ತು ಅವಧಾರಣಾರ್ಥವಾದ ಎಕಾರವು ಮುಂದಿದ್ದರೆ, ಯಕಾರವಾಗುವದು.

Determinate form of the genitive.

ಪ್ರಯೋಗ:

ಆತನ+ಎ=ಆತನಯೆ; ಅದರ+ಎ=ಅದರಯೆ.

12. ಸಂಸ್ಕೃತದ ಮತ್ತು ಕನ್ನಡದ ಅಕಾರಾಂತವಾದ ಪ್ರಕೃತಿಗಳಿಗೆ ಇಸು ಎಂಬ ಪ್ರತ್ಯಯ ಪರವಾದರೆ, ನಡುವೆ ಯಕಾರವಾಗುವದು; ಅನುಕರಣ ಪದಕ್ಕೂ, ಮುಂದೆ ಅನುಕರಣವ ಹೇಳುವ ಸ್ವರ ನಿಂತರೆ, ಯಕಾರವಾಗುವದು.

Use of ಯ in causal verbs.

ಪ್ರಯೋಗ:

ಸಂಸ್ಕೃತ ಶಬ್ದಕ್ಕೆ: ಪೂರ+ಇಸಿದಂ=ಪೂರಯಿಸಿದಂ=ಪೂರ್ಯೈಸಿದಂ.
ಕರ್ಣಾಟಕ ಶಬ್ದಕ್ಕೆ: ಒರ+ಇಸು=ಒರಯಿಸು (=ತಿಕ್ಕು).
ಅನುಕರಣಕ್ಕೆ: ಗಳಗಳ+ಎಂದವು=ಗಳಗಳಯೆಂದವು.

Euphony omitted.

13. ನಿಪಾತಗಳಲ್ಲಿ, ಅಥವಾ ಅವಧಾರಣಾರ್ಥವಾಗಿ, ಅಥವಾ ವಿಶಂಕಾರ್ಥವಾಗಿ ನಿರ್ವಿಕಾರಿಗಳಾಗಿರುವ ಎಏ ಒಓ ಎಂಬೀ ಸ್ವರಗಳಿಗೆ ಸ್ವರ ಪರವಾದರೆ, ಸಂಧಿ ಇಲ್ಲ; ಪ್ಲುತಕ್ಕೂ ಸಂಧಿ ಇಲ್ಲ.

ಪ್ರಯೋಗ:

ನಿಪಾತಕ್ಕೆ: ಎಲೋ ಆಳ! ಹೊ ಇರಲಿಂ!
ಅವಧಾರಣೆಗೆ: ಆತನೇ ಈಶಂ (ಆತನೀಶಂ ಇದು ದೋಷ).
ವಿಶಂಕೆಗೆ: ಆನೆಯೊ ಅದ್ರಿಯೊ?
ಪ್ಲುತಕ್ಕೆ; ಹಾ ರಾಮೋ ಎಂದು ಸೀತೆ ಅತ್ತಳು.

14. ಮೆಚ್ಚಿನಲ್ಲಿ ಆಕ್ಷೇಪಕದಲ್ಲಿ ಬಂದಿರುವ ಒಕಾರಕ್ಕೂ, ಅಂಗೀಕಾರಾರ್ಥದ ಎಮ ಶಬ್ದಕ್ಕೂ, ಗಡಾರ್ಥಕ್ಕೆ ಆದೇಶವಾದ ಆಕಾರಕ್ಕೂ ಸ್ವರ ಪರವಾಗಲಾಗಿ, ಸಂಧಿ ಇಲ್ಲ; ಖೇದದಲ್ಲಿಯು ಅಂತೆ ಸಂಧಿ ಇಲ್ಲ.

ಪ್ರಯೋಗ:

ಮೆಚ್ಚಿಗೆ: ಎಂತೆಂತೊ ಒಳ್ಳಿತ್ತಾಯಿತು. ಆಕ್ಷೇಪಕ್ಕೆ: ತಪ್ಪಿದನೊ.
ಎಮಶಬ್ದಕ್ಕೆ: ಎಮ ಅಕ್ಕಂ ಎಮಕ್ಕಂ ಅಂತು ಮಾಡಲಾಗದು.
ಗಡಾಶಬ್ದದಾಕಾರಕ್ಕೆ: ಗಡಾ ಆಳುಗಳು ಬಂದವು.
ಖೇದಕ್ಕೆ: ಅಯ್ಯೋ ಅವನಿಗೆ ಕೇಡಾಯಿತೆ.

15. ಪೊರಗು, ಒಳಗು, ಪೊಸತು, ಪಳದು, ಎಳದು ಎಂಬಿವಕ್ಕೆ ಸಮಾಸ ವಿಷಯದಲ್ಲಿ ಉಪಾಂತಾಕ್ಷರಕ್ಕೆ ಲೋಪಾಗಿ ಅಕಾರ ಹತ್ತಿ ನಿಪಾತದಂತೆ, ಪರದಲ್ಲಿ ಸ್ವರ ಯಾವದು ಬಂದರೂ, ಸಂಧಿ ಇಲ್ಲ.

### ಪ್ರಯೋಗ:

ಪೊರ ಅಡಿ, ಒೞ ಅಟ್ಟವು, ಪೊಸ ಅಡಿಕೆ, ಪೞ ಅಲಗು, ಎೞ ಅಂಪೆ (ಪೊರಡಿ ಎಂದು ಸಂಧಿ ಮಾಡಲಾಗದು).

16. ಎರಡು ಪದಗಳ ನಡುವೆ ಬೇರೊಂದು ಅಸಂಹ್ಯೋಕ್ತಿ ಹುಟ್ಟಿದರೆ, ಸಂಧಿ ಮಾಡಲಾಗದು; ಹಾಗೂ ಶ್ರುತಿ ಕಷ್ಟವಾದರೆ, ಸಂಧಿ ಸಲ್ಲದು.

### ಪ್ರಯೋಗ:

ಸಂಧಿ ದೋಷಕ್ಕೆ: ದೇವರ್ ರಕ್ಷಿಸುಗೆ, ಮುಂತ.

17. ಅವಧಾರಣೆಯ ಎಕಾರವು ತನ್ನ ನಿಯತಾರ್ಥವ ಬಿಟ್ಟು ಅನಿಯೋಗವಾದಲ್ಲಿಯೂ, ಕಿರಿದೆಡೆಯ ಹೇಳುವ ನಿಪಾತಾರ್ಥದ ಅರೆ ಎಂಬ ಶಬ್ದವು ಒಂದು ವಸ್ತುವಿನ ಭಾಗವ ಹೇಳುವಲ್ಲಿಯೂ, ಸಂಧಿಯುಂಟು.

Euphony in ಎ and ಅರೆ.

### ಪ್ರಯೋಗ:

ಅನಿಯೋಗ ಸಂಧಿಗೆ: ತನಿಗಂಪಿನ ಮಲ್ಲಿಗೆಯಲ್ಲದಿಲ್ಲ—ಅಲ್ಲದೆ+ಇಲ್ಲ.
ಅರೆಯ ಸಂಧಿಗೆ: ಅವನು ನರಪತಿಯನ್ನು ಧರೆಯರೆಯಂ ಬೇಡಿದಂ.

18. ಕತಪ ಎಂಬೀ ವರ್ಗಾಕ್ಷರಗಳು ಸಮಾಸದಲ್ಲಿ ಪರಪದದ ಆದಿಯಲ್ಲಿ ಇದ್ದರೆ, ಗದಬ ಎಂಬ ತಮ್ಮ ತೃತಿಯಾಕ್ಷರಗಳು ಆಗುವವು.

Euphony in consonants. ವ್ಯಂಜನ ಸಂಧಿ.

### ಪ್ರಯೋಗ:

ಕಕಾರದ ತೃತಿಯತ್ವಕ್ಕೆ: ಪೞ ಕನ್ನಡ=ಪೞಗನ್ನಡ.
ತಕಾರದ ತೃತಿಯತ್ವಕ್ಕೆ: ಉಡಿ ತೊವಲು=ಉಡಿದೊವಲು.
ಪಕಾರದ ತೃತಿಯತ್ವಕ್ಕೆ: ಕಣ್ಪುರೆ=ಕಣ್ಬುರೆ.

ಆದರೆ ಆ ತೃತಿಯಾಕ್ಷರವಾಗುವಲ್ಲಿ, ಬಹುಳ ಸ್ಥಿತಿಯನ್ನು (ಆ ಶಬ್ದದ ಸಂಪೂರ್ಣ ಸ್ಥಿತಿಯನ್ನು) ಬಿಡ ಬಾರದು.

### ಪ್ರಯೋಗ:

ಕಂಬುರೆ ಎಂದು ಮಾಡಲಾಗದು. ಕಣ್ ಎಂದು ಬಹುಳ ಸ್ಥಿತಿ ಇಡ ಬೇಕು.
ಬಹುಳತೆಗೆ: ತಲೆ ಕಟ್ಟು (ತಲೆಗಟ್ಟು).

ಇದಕ್ಕೆ ಅಪವಾದ: ಒಂದು ಎರಡು ಎಂಬಿವಕ್ಕೂ, ಹಳೆಗನ್ನಡದಲ್ಲಿ ವರ್ತಿಸುತ್ತಿದ್ದ ಬಹಳ ಪರುಷವಾದ ರಕಾರಕ್ಕೆ ಆದೇಶವಾಗಿ ಬಂದ ರೇಫೆಗೂ, ಡಕಾರಕ್ಕೆ ಆದೇಶವಾದ ಳಕಾರಕ್ಕೂ, ಪರವಾದ ಕ ತ ಪ ಎಂಬೀ ವರ್ಗಾಕ್ಷರಗಳಿಗೆ ಎಂದಿಗೂ ತೃತಿಯತ್ವವಿಲ್ಲ.

## ಪ್ರಯೋಗ:

ಒಂದಕ್ಕೆ: ಒಂದು ತುತ್ತು=ಒರ್ತುತ್ತು (ದೋಷ: ಒರ್ದುತ್ತು.) (ಒರ್ಕೆ) ಒರ್ಗೆ.

ಎರಡಕ್ಕೆ: ಎರಡು ತಲೆ=ಇರ್ತಲೆ. (ದೋಷ: ಇರ್ದಲೆ). ಎರಡು ಹತ್ತು=ಇರ್ಪತ್ತು (ದೋಷ: ಇರ್ಬತ್ತು).

ಆದೇಶವಾಗಿ ಬಂದ ರೇಫೆಗೆ: ಮೂರು ತಲೆ=ಮೂರ್ತಲೆ (ದೋಷ: ಮೂರ್ದಲೆ). ಎರ್ಪತ್ತು—ಮೂರ್ಕೋರಲು.

ಡಕಾರಕ್ಕಾದೇಶವಾದ ಳಕಾರಕ್ಕೆ: ಕಾಳ್ಪುರ (ಹೊಳೆ) ಕಾಳ್ಕಿಚ್ಚು.

ಆದರೂ ಅನೇಕ ಕವಿಗಳು ಈ ವಿಧಿಯನ್ನು ಅನುಸರಿಸದೆ, ಒರ್ದುತ್ತು ಇರ್ದಲೆ ಕಾಳ್ಗಿಚ್ಚು ಇತ್ಯಾದಿ ಮಾಡುತ್ತಾರೆ.

ಪ, ಬ, ಮ changed into ವ.

19. ಸಮಾಸದಲ್ಲಿಯೂ, ವಾಕ್ಯದಲ್ಲಿಯೂ, ಪರಪದದ ಆದಿಯಲ್ಲಿ ಪವರ್ಗಾಕ್ಷರಗಳು ಸ್ವರಗಳಿಗೂ, ಆದೇಶವಾಗಿ ಬಾರದ ಸಹಜ ವ್ಯಂಜನಗಳಿಗೂ, ಪರವಾಗಿ ನಿಂತರೆ, ಅವುಗಳ ಸ್ಥಾನಕ್ಕೆ ವಕಾರವಾಗುವದು.

## ಪ್ರಯೋಗ:

### ಸ್ವರಕ್ಕೆ ಪರವಾದ ಪವರ್ಗಕ್ಕೆ:

ಪಕಾರಕ್ಕೆ: ಬೆಳೆ+ಪೊಲಂ=ಬೆಳೆವೊಲಂ.

ಬಕಾರಕ್ಕೆ: ಕಡು+ಬೆಳ್ಪು=ಕಡುವೆಳ್ಪು. ತಡಿಕೆ+ಬಲೆ=ತಡಿಕೆವಲೆ.

ಮಕಾರಕ್ಕೆ: ಪಳೆ ಮಾನಿಸಂ=ಪಳೆವಾನಿಸಂ.

ಸಹಜ ವ್ಯಂಜನಕ್ಕೆ ಪರವಾದ ಪವರ್ಗಕ್ಕೆ:

ಪಕಾರಕ್ಕೆ: ಮೈಯ್ಪೇಸಂ=ಮೈಯ್ವೇಸಂ.

ಬಕಾರಕ್ಕೆ: ತೋಳ್ ಬಲ=ತೋಳ್ವಲ=ತೋಳ್ವಲ; ಎಳೆ ನೀರ್ ಪೊನಲ್=ಎಳೆನಿರ್ವೊನಲ್.

ಮಕಾರಕ್ಕೆ: ಮೆಲ್ಮಾತು=ಮೆಲ್ವಾತು=ಮೆಲ್ವಾತು.

ಆದೇಶ ವ್ಯಂಜನಕ್ಕೆ ವತ್ವವಿಲ್ಲದಕ್ಕೆ:

ಪಕಾರಕ್ಕೆ: ಕೀಳ್ಪೊದೆ (ಸಣ್ಣ ಹೊಟ್ಟೆ) ದೋಷ: ಕೀಳ್ವೊದೆ.

ಬಕಾರಕ್ಕೆ: ಇರ್ಬಾಳ್ (ಎರಡು ಕತ್ತಿ) ದೋಷ: ಇರ್ವಾಳ್.

ಮಕಾರಕ್ಕೆ: ಇರ್ಮಡಿ. ದೋಷ: ಇರ್ವಡಿ.

ವಾಕ್ಯಕ್ಕೆ ವತ್ವ ಬಂದದಕ್ಕೆ:

ಪಕಾರಕ್ಕೆ: ತರಪೇಳ್ದಂ=ತರವೇಳ್ದಂ.

ಬಕಾರಕ್ಕೆ: ಬೆಂಗೆ (ಬೆನ್ನಿಗೆ) ಬಂದಂ=ಬೆಂಗೆವಂದಂ.

ಮಕಾರಕ್ಕೆ: ಸಾರ್ದಂಮನೆಯಂ=ಸಾರ್ದಂವನೆಯಂ.

ಈ ವಿಧಿಗಳು ಅಪಭ್ರಂಶದ ಸಮಾಸಗಳಲ್ಲಿಯೂ ವರ್ತಿಸುವವು.

20. ಯಕಾರ ಲಕಾರಗಳಲ್ಲದೆ ಉಳಿದ ವ್ಯಂಜನಗಳಿಗೆ ಪರವಾಗಿನಿಂದ ಸಕಾರವು ಬಹಳವಾಗಿ ಚಕಾರವಾಗುವದು; ಕೆಲವು ಸ್ಥಳಗಳಲ್ಲಿ ಜಕಾರವಾಗುವದು, ಸ್ವಲ್ಪ ಸ್ಥಳಗಳಲ್ಲಿ, ಸಂಖ್ಯಾವಾಚಿ ಆಗಲಾಗಿ, ಛಕಾರವಾಗುವದು.

ಸ changed into ಚ, ಜ, ಛ.

ಪ್ರಯೋಗ:

ಚತ್ವಕ್ಕೆ: ಇನ್+ಸರ (ಸ್ವರ)=ಇಞ್ಚರ (ಸವಿಸ್ವರ). ನುಣ್ಚರ (ನುಣ್ಣಗಾದ ಸ್ವರ).

ಜತ್ವಕ್ಕೆ: ಪೊನ್ಸುರಿಗೆ=ಪೊನ್ಜುರಿಗೆ=ಪೊಂಜುರಿಗೆ (ಹೊಂನಿನಂತಿರುವ ಸುರಿಗಿ ಹೂವು).

ಘತ್ವಕ್ಕೆ: ಪದಿನೆಣ್ಸಾಸಿರ=ಪದಿನೆಣ್ಛಾಸಿರಂ.
ಕೆಲವು ಎಡೆಯಲ್ಲಿ ಇಲ್ಲದಕ್ಕೆ: ಕಣ್ಸೋಲಂ, ಬೆಳ್ಸರಿ (ಬಿಳೆಕೆರೆ).
ಯಲರಹಿತಕ್ಕೆ: ಬಲ್ಸೋನೆ. ಬಾಯ್ಸವಿ. ದೋಷ: ಬಲ್ಚೋನೆ ಮುಂತೆ.

ಬಹುಳವಾಗುವ ಹಾಗೆ, ಸ್ವಲ್ಪ ಸ್ಥಳಗಳಲ್ಲಿ ಸ್ವರಗಳ ಪರದಲ್ಲಿದ್ದ ಸಕಾರಕ್ಕೂ ಚಕಾರಗಳಾಗುವವು.

ಪ್ರಯೋಗ:

ಮುಸಾಲ್=ಮುಚ್ಚಾಲ್=ಮೂರುಸಾಲು, ಮುಚ್ಚರೆ (ಮೂರುಸೆರೆ. ತುಡುಸೊಡರು=ತುಡುಜೊಡರು=ಸುಮಾರು ದೀಪ.)

Doubling of consonants.

21. ಮೊದಲಲ್ಲಿ ಹ್ರಸ್ವವಾದ ಒಂದು ಸ್ವರ ಇರಲಾಗಿ, ಮುಂದೆ ಯಾವದೊಂದು ಸ್ವರ ಪರವಾದರೆ, ನ ಣ ಲ ಯ ಳ ಕಾರಗಳಿಗೆ ದ್ವಿತ್ವ ಹುಟ್ಟುವದು. ಆದರೆ ಆದಿಯಲ್ಲಿ ದೀರ್ಘಕ್ಕೆ, ಅನೇಕಾಕ್ಷರಕ್ಕೆ ದ್ವಿತ್ವವಿಲ್ಲ.

ಪ್ರಯೋಗ:

ನಕಾರಕ್ಕೆ: ಪೊನ್=ಪೊನ್ನುಳ್ಳವನು. ಬೆನ್=ಬೆನ್ನಿನ.
ಣಕಾರಕ್ಕೆ: ಕಣ್=ಕಣ್ಣುಗಳ್. ಪಣ್=ಪಣ್ಣಂ.
ಲಕಾರಕ್ಕೆ: ಕಲ್, ಕಲ್ಮಳೆ=ಕಲ್ಲಂ, ಕಲ್ಲುಮಳೆ.
ಯಕಾರಕ್ಕೆ: ಕೈಯ್=ಕೈಯ್ಯಂ. ಮೈಯ್=ಮೈಯ್ಯಂ.
ಳಕಾರಕ್ಕೆ: ಮುಳ್, ಮುಳ್ಮೊನೆ=ಮುಳ್ಳು, ಮುಳ್ಳಿನ ಮೊನೆ. ಕಳ್=ಕಳ್ಳಾಟಂ, ಬಳ್+ಆಳು=ಬಳ್ಳಾಳು.
ಪೂರ್ವ ದೀರ್ಘಕ್ಕೆ ದ್ವಿತ್ವವಿಲ್ಲದಕ್ಕೆ: ಮೀನಾಗಿ, ಜಾಣಂ, ಕೇಲಂ, ಬಾಯೂರು, ಶೋಳಾಟಂ.

ಅನೇಕಾಕ್ಷರಕ್ಕೆ ದ್ವಿತ್ವವಿಲ್ಲದಕ್ಕೆ:

ಪವಣಿಲ್ಲಂ, ತೊದಳುಂಟೆ=ಸುಳ್ಳುಂಟೆ. ದೋಷಕ್ಕೆ: ತೊದಳ್ಳುಂಟೆ.

*Exception to the above rule.*

22. ನ ಣ ಲ ಯ ೞ ಕಾರಗಳು ಅಂತ್ಯವಾದ ಧಾತುಗಳಿಗೆ ಅಲ್ ಅಲು ಎಂಬದೂ ಸಮುಚ್ಚಯಾರ್ಥವಾದ ಎಕಾರಾದಿ ಸ್ವರಗಳೂ ಪರವಾದರೆ, ದ್ವಿತ್ವ ಹುಟ್ಟದು; ಯಕಾರಾಂತ ಧಾತುಗಳಲ್ಲಿ ವಿಕಲ್ಪವಾಗಿ ಬರುವದು:

ಪ್ರಯೋಗ:

ಅದ್ವಿತ್ವಕ್ಕೆ: ತಿನಲ್ ಕೊಂದಂ. ದೋಷ: ತಿನ್ನಲ್ ಕೊಂದಂ. ಎನೆ (ದೋಷ: ಎನ್ನೆ) ಕೊಳೆ, ಉಣಲೊಡಂ, ಕೞಲೊಡಂ.
ಯತ್ವಕ್ಕೆ: ಪೊಯಲ್, ಪೊಯಲುಂ, ಪೊಯ್ಯಲ್, ಆರಯಲ್, ಆರಯ್ಯಲ್.
ನಿತ್ಯದ್ವಿತ್ವಕ್ಕೆ: ನೆಯ್ಯರ್—ಬಯ್ಯೆವು ಸುಯ್ಯರ್.

*Doubling of consonants in the negative mood.*

23. ನ ಣ ಲ ಯ ೞ ಕಾರಾಂತವಾದ ಧಾತುಗಳಿಗೆ ಪ್ರತಿಷೇಧದ ಪ್ರತ್ಯಯಗಳು ಹತ್ತಲಾಗಿ, ಆ ನ ಣ ಲ ಯ ೞ ಕಾರಗಳಿಗೆ ನಿತ್ಯ ದ್ವಿತ್ವವಾಗುವದು.

ಪ್ರಯೋಗ:

ನಕಾರಕ್ಕೆ: ಎನ್ನಂ, ಎನ್ನೞ್, ತಿನ್ನರ್.
ಣಕಾರಕ್ಕೆ: ಉಣ್ಣರ್, ಉಣ್ಣವು, ಉಣ್ಣದ.
ಲಕಾರಕ್ಕೆ: ಮೆಲ್ಲಯ್, ಮೆಲ್ಲದ, ಮೆಲ್ಲಂ.
ಯಕಾರಕ್ಕೆ: ಬಯ್ಯೆನ್, ಬಯ್ಯಂ.
ೞಕಾರಕ್ಕೆ: ಕೊೞ್ೞದೆ, ಕೊೞ್ೞಂ, ಕೊೞ್ೞರ್.
ಕೞ್ ಎಂಬ ಧಾತುವಿಗೆ ಮಾತ್ರ ಎಲ್ಲಿಯೂ ದ್ವಿತ್ವವಿಲ್ಲ: ಕೞದೆ, ಕೞನ್=ಮುಂತ.

## III. (NOUNS) ನಾಮಪ್ರಕರಣ.

*Verbal nouns, or participles used as nouns.*

24. ಭೂತಕಾಲದ, ಹಾಗೂ ಭವಿಷ್ಯತ್ಕಾಲದ ಕ್ರಿಯಾಪದಗಳು ತಮ್ಮ ತಮ್ಮ ಅಂತರ್ಗತಾಗಮಗಳನ್ನು ಕೂಡಿದ್ದು ತಮ್ಮ ಕ್ರಿಯಾವಿಭಕ್ತಿಗಳನ್ನು ಮಾತ್ರ ಕಳೆಯಲಾಗಿ, ಕೃಲ್ಲಿಂಗವಾಗುವವು. ಆದರೆ ಇದು ಪ್ರಥಮ ಪುರುಷದ ಏಕ ಬಹು ವಚನಗಳಲ್ಲಿ ಮಾತ್ರ ವರ್ತಿಸುವದು.

## ಪ್ರಯೋಗ:

### ಭೂತವತಿಯ ಕೃಲ್ಲಿಂಗಗಳು.

| | | ಪುಲ್ಲಿಂಗ. | ಸ್ತ್ರೀಲಿಂಗ. | ನಪುಂಸಕಲಿಂಗ. |
|---|---|---|---|---|
| ಏಕವಚನ. | ಕರ್ತೃ ವಿಭಕ್ತಿ. | ಮಾಡಿದಂ | ಮಾಡಿದಳ್ | ಮಾಡಿದುದು |
| | ಕರ್ಮ ವಿಭಕ್ತಿ. | ಮಾಡಿದನಂ | ಮಾಡಿದಳಂ | ಮಾಡಿದುದಂ |
| | ಕರಣ ವಿಭಕ್ತಿ. | ಮಾಡಿದನಿಂ | ಮಾಡಿದಳಿಂ | ಮಾಡಿದುದರಿಂ |
| | ಸಂಪ್ರದಾನ ವಿಭಕ್ತಿ. | ಮಾಡಿದಂಗೆ | ಮಾಡಿದಳ್ಗೆ | ಮಾಡಿದುದರ್ಕೆ (ಕ್ಕೆ) |
| | ಅಪಾದಾನ ವಿಭಕ್ತಿ. | ಮಾಡಿದನತ್ತಣಿಂ | ಮಾಡಿದಳತ್ತಣಿಂ | ಮಾಡಿದುದರತ್ತಣಿಂ |
| | ಸಂಬಂಧ ವಿಭಕ್ತಿ. | ಮಾಡಿದನ | ಮಾಡಿದಳ | ಮಾಡಿದುದರ |
| | ಅಧಿಕರಣ ವಿಭಕ್ತಿ. | ಮಾಡಿದನೊಳ್ | ಮಾಡಿದಳೊಳ್ | ಮಾಡಿದುದರೊಳ್ |
| | ಸಂಬೋಧನ. | ಮಾಡಿದನೆ | ಮಾಡಿದಳೆ | ಮಾಡಿದುದೆ |
| ಬಹುವಚನ. | ಪ್ರಥಮೆ. | ಮಾಡಿದರ್ | | ಮಾಡಿದುವು |
| | ದ್ವಿತಿಯೆ. | ಮಾಡಿದರಂ | | ಮಾಡಿದುವಂ |
| | ತ್ರಿತಿಯೆ. | ಮಾಡಿದರಿಂ | | ಮಾಡಿದುವರಿಂ |
| | ಚತುರ್ಥಿ. | ಮಾಡಿದರ್ಗೆ | | ಮಾಡಿದುವರ್ಗೆ |
| | ಪಂಚಮಿ. | ಮಾಡಿದರತ್ತಣಿಂ | | ಮಾಡಿದುವರತ್ತಣಿಂ |
| | ಷಷ್ಠಿ. | ಮಾಡಿದರ | | ಮಾಡಿದುವರ |
| | ಸಪ್ತಮಿ. | ಮಾಡಿದರೊಳ್ | | ಮಾಡಿದುವರೊಳ್ |
| | ಸಂಬೋಧನ. | ಮಾಡಿದರೆ | | ಮಾಡಿದುವೆ |

1. ಮಾಡಿದಂಗೆ ಎಂಬ ರೂಪದಲ್ಲಿ ಬಿಂದು ಒಂದು ವೇಳೆಯಲ್ಲಿ ಹೋಗಿ ಮಾಡಿದಗೆ ಎಂದಾಗುವದು.

2. ಷಷ್ಟ್ಯಿಯ ಅವಧಾರಣಾರ್ಥವಾದ ರೂಪಗಳು ಮಾಡಿದನಯೆ, ಮಾಡಿದಳಯೆ, ಮಾಡಿದುದರಯೆ, ಮಾಡಿದರಯೆ—ಮಾಡಿದುವರಯೆ ಎಂಬಂತೆ ಆಗುವವು.

## ಭವಿಷ್ಯಂತಿಯ ಕೃಲ್ಲಿಂಗಗಳು.

### ಏಕವಚನ.

| ವಿಭಕ್ತಿ. | ಪುಲ್ಲಿಂಗ. | ಸ್ತ್ರೀಲಿಂಗ. | ನಪುಂಸಕಲಿಂಗ. |
|---|---|---|---|
| ಪ್ರ. | ಬೇಡುವಂ | ಬೇಡುವಳ್ | ಬೇಡುವುದು |
| ದ್ವಿ. | ಬೇಡುವನಂ | ಬೇಡುವಳಂ | ಬೇಡುವುದಂ |
| ತ್ರಿ. | ಬೇಡುವನಿಂ | ಬೇಡುವಳಿಂ | ಬೇಡುವುದರಿಂ |
| ಚ. | ಬೇಡುವಂಗೆ | ಬೇಡುವಳ್ಗೆ | ಬೇಡುವುದರ್ಕೆ (ಕ್ಕೆ) |
| ಪ. | ಬೇಡುವನತ್ತಣಿಂ | ಬೇಡುವಳತ್ತಣಿಂ | ಬೇಡುವುದರತ್ತಣಿಂ |
| ಷ. | ಬೇಡುವನ | ಬೇಡುವಳ | ಬೇಡುವುದರ |
| ಸ. | ಬೇಡುವನೊಳ್ | ಬೇಡುವಳೊಳ್ | ಬೇಡುವುದರೊಳ್ |
| ಸಂಭೋ. | ಬೇಡುವನೆ | ಬೇಡುವಳೆ | ಬೇಡುವುದೆ |

### ಬಹುವಚನ.

| ವಿಭಕ್ತಿ. | ಪುಲ್ಲಿಂಗ. | ಸ್ತ್ರೀಲಿಂಗ. | ನಪುಂಸಕಲಿಂಗ. |
|---|---|---|---|
| ಪ್ರ. | ಬೇಡುವರ್ | | ಬೇಡುವುವು |
| ದ್ವಿ. | ಬೇಡುವರಂ | | ಬೇಡುವುವಂ |
| ತ್ರಿ. | ಬೇಡುವರಿಂ | | ಬೇಡುವುವರಿಂ |
| ಚ. | ಬೇಡುವರ್ಗೆ | | ಬೇಡುವುವರ್ಗೆ |
| ಪ. | ಬೇಡುವರತ್ತಣಿಂ | | ಬೇಡುವುವರತ್ತಣಿಂ |
| ಷ. | ಬೇಡುವರ | | ಬೇಡುವುವರ |
| ಸ. | ಬೇಡುವರೊಳ್ | | ಬೇಡುವುವರೊಳ್ |
| ಸಂಭೋ. | ಬೇಡುವರೆ | | ಬೇಡುವುವೆ |

1. ಏಕತ್ವದ ಚತುರ್ಥಿಯಲ್ಲಿ ಬೇಡುವಗೆ ಎಂಬ ರೂಪ ಸಹಾ ವರ್ತಿಸುವದು.

2. ಈ ಕೃಲ್ಲಿಂಗಗಳು ಹೊಸಗನ್ನಡದಲ್ಲಿ ಮಾಡಿದವನು, ಮಾಡಿದವಳು, ಮಾಡಿದ್ದು, ಬೇಡುವವನು ಬೇಡುವವಳು ಬೇಡುವದು ಎಂದಾದವು. ಈ ಪ್ರಕಾರ ಇಸು ಪ್ರತ್ಯಯ ಹತ್ತಿದ ಕ್ರಿಯಾಪದಗಳನ್ನು ರೂಪಿಸಬೇಕು. ಭಾಗಿಸಿದಂ—ಭಾಗಿಸಿದಳ್—ಭಾಗಿಸಿದುದು—ಭಾಗಿಪಂ—ಭಾಗಿಪಳ್—ಭಾಗಿಪುದು.

3. ಇವುಗಳಂತೆ ನಿಷೇಧದ ಕೃಲ್ಲಿಂಗಗಳು ಸಹಾ ರೂಪಾಗುವವು. ಮಾಡದಂ—ಮಾಡದಳ್—ಮಾಡದುದು. ಮಾಡದನಂ—ಮಾಡದಳಂ—ಮಾಡದುದಂ ಮುಂ.

Use of Sanscrit adverbs etc.

25. ಸಂಸ್ಕೃತದ ಅವ್ಯಯಗಳೂ, ತ್ಯದಾದಿಯಾದ ಸರ್ವನಾಮಗಳೂ, ತಕಾರಾಂತವಾದ ಶಬ್ದಗಳೂ ಸಂಸ್ಕೃತದಲ್ಲಿ ಸಮಾಸವಿಧಿಯನ್ನು ಧರಿಸಿದ್ದಲ್ಲದೆ ಕನ್ನಡದಲ್ಲಿ ಸ್ವಭಾವದಿಂದ ಲಿಂಗಗಳಾಗವು. ಅಂತರ್ (ಒಳಗೆ) ಬಹಿರ್ (ಹೊರಗೆ) ಉಚ್ಚೈಸ್ (ಘಟ್ಟಿಧ್ವನಿ) ನೀಚೈಸ್ (ಕೆಳಗೆ, ಮೆಲ್ಲಗೆ) ಮುಹುಃ (ಮತ್ತು) ಅಹಸ್ (ಹಗಲು) ಈಷತ್ (ತುಸ) ಯುಗಪತ್ (ಕೂಡೆ) ಪೃಥಕ್ (ಬೇರೆ) ಇವು ಮೊದಲಾದ ಸಹಜಾವ್ಯಯಗಳನ್ನು ಇರಿಸಿ ವಿಭಕ್ತಿಗಳನ್ನು ಹತ್ತಿಸಲಾಗದು.

ಪ್ರಯೋಗ:

ಅವ್ಯಯಕ್ಕೆ: ಅಂತರ್ಮುಖಂ, ಬಹಿರಂಗಂ, ಉಚ್ಚೈರ್ಧ್ವಾನಂ, ನೀಚೈರ್ಗತಂ, ಮುಹುರ್ನಿರೀಕ್ಷಣಂ, ಪುನಃಪಾಕಂ, ಪ್ರಾತಃಕಾಲಂ, ಅಹರ್ನಿಶಂ, ಈಷದ್ಭೇದಂ, ಯುಗಪತ್ಸಂಭ್ರಮಂ, ಪೃಥಕ್ಚರಿತ್ರಂ ಎಂದು ಸಮಾಸ ಮಾಡಿ ಅಂತರ್ಮುಖಂ—ಅಂತರ್ಮುಖನಂ ಇತ್ಯಾದಿ ವಿಭಕ್ತಿಗಳನ್ನು ಹತ್ತಿಸ ಬೇಕು.

ತ್ಯದಾದಿ ಸರ್ವನಾಮಕ್ಕೆ: ತ್ಯತ್ಕಥನ (ಆ ಕಥೆ) ತದ್ವಚನ (ಆ ವಚನ) ಏತತ್ಸಾಖ್ಯಂ (ಈ ಸಾಖ್ಯ) ಇದನ್ನಿಮಿತ್ಯ (ಈ ನಿಮಿತ್ಯ) ಅದಃಪುತ್ರಂ (ಅವನ ಮಗನು) ಯುಷ್ಮದ್ಗುಣಂ (ನಿಮ್ಮ ಗುಣ)

ಅಸ್ಮದ್ದುಹಿತ್ರಂ (ನಮ್ಮ ಮಗಳು) ಭವದ್ರಾಜ್ಯಂ (ತಮ್ಮ ರಾಜ್ಯ) ಕಿಂವಾರ್ತೆ (ಯಾವವಾರ್ತೆ) ಈ ತೆರದಿಂದ ಸಮಾಸ ಮಾಡಿ ವಿಭಕ್ತಿ ಹತ್ತಿಸುವದು. ಅದಃಪುತ್ರಂ—ಅದಃಪುತ್ರನಂ ಮುಂ.

ತಕಾರಾಂತ ಶಬ್ದಕ್ಕೆ: (ಇವು ಸಂಸ್ಕೃತದಲ್ಲಿ ವರ್ತಮಾನಕಾಲದ ಕೃಲ್ಲಿಂಗಗಳು). ಕ್ಷಣತ್ (ಸಪ್ಪಳ ಮಾಡುವ)=ಕ್ಷಣತ್ಕಂಕಣಂ—ಭ್ರಮತ್ (ತಿರುಗುವ)=ಭ್ರಮದ್ಭ್ರಮರಂ—ಘೋಷ್ಯತ್ (ಘೋಷಿಸುವ)=ಘೋಷ್ಯದರ್ಣವಂ—ಲಸತ್ (ಬಪ್ಪುವ)=ಲಸದ್ವಚನಂ ಎಂದು ಸಮಾಸ ಮಾಡಿ ಎಲ್ಲಿಕ್ಕು ವಿಭಕ್ತಿಯು ಹತ್ತಿಸುವದು: ಭ್ರಮದ್ಭ್ರಮರಂ, ಭ್ರಮದ್ಭ್ರಮರಮಂ ಮುಂ.

26. ಏಕ, ದ್ವಿ, ತ್ರಿ ಎಂಬಿವಾದಿಯಾದ ಸಂಸ್ಕೃತ ಸಂಖ್ಯಾವಾಚಶಬ್ದಗಳು ಸ್ವಭಾವದಿಂದಲ್ಲ, ಸಮಾಸವನ್ನು ಅಥವಾ ಪ್ರತ್ಯಯಾಂತವನ್ನು ಹೊಂದಿ ಲಿಂಗಗಳಾಗುವವು. ಆಕಾರಾಂತವಾದ ಸಂಸ್ಕೃತ ಶಬ್ದಗಳು ಏಕಾರವನ್ನು ಅಥವಾ ಅಕಾರವನ್ನು ಹೊಂದಿ ಕನ್ನಡದಲ್ಲಿ ಲಿಂಗಗಳು ಆಗುವವು.

Use of Sanscrit numbers and nouns terminating in vowels.

## ಪ್ರಯೋಗ:

ಸಮಾಸಕ್ಕೆ: ಏಕಾಂಗಂ, ದ್ವಿಮುಖಂ, ತ್ರಿಲೋಕಂ, ಚತುರ್ವೇದಂ, ಪಂಚಭೂತಂ, ಷಟ್ಕರ್ಮಂ, ಸಪ್ತದ್ವೀಪಂ, ಅಷ್ಟಭುಜಂ, ನವನಿಧಿ, ದಶವ್ಯಾಕರಣ.

ಪ್ರತ್ಯಯಾಂತಕ್ಕೆ: ದ್ವಿತೀಯ, ತೃತೀಯ, ಚತುರ್ಥ, ತುರೀಯ, ತುರ್ಯ—ಪಂಚಮ, ಷಷ್ಟ, ಸಪ್ತಮ, ಅಷ್ಟಮ, ನವಮ, ದಶಮ,—ಅಷ್ಟಕ.

ಆಕಾರಾಂತ ಶಬ್ದಕ್ಕೆ: ಮಾಲಾ=ಮಾಲೆ, ಬಾಲಾ=ಬಾಲೆ, ಲೀಲಾ=ಲೀಲೆ, ಭಾಷಾ=ಭಾಷೆ, ಯಾತ್ರಾ=ಯಾತ್ರೆ.—ಗ್ರೀವಾ (ಕೊರ

ಕ್ಷು) ಭಿಕ್ಷಾ ಎಂಬೆರಡು ಶಬ್ದಗಳು ಗ್ರೀವಾ, ಗ್ರೀವೆ, ಭಿಕ್ಷಾ, ಭಿಕ್ಷೆ ಎಂದು ವರ್ತಿಸುತ್ತವೆ.

ಆಕಾರಾಂತದ ಅಕಾರಕ್ಕೆ: ಕಂಧರಾ=ಕಂಧರ, ಉಪತ್ಯಕಾ=ಉಪತ್ಯಕ (ಗುಡ್ಡದ ಬುಡದಲ್ಲಿಯ ಭೂಮಿ). ಕರುಣಾ=ಕರುಣ.

ಈ ಪ್ರಕಾರ ಲಿಂಗಗಳಾಗಿ ವಿಭಕ್ತಿಪ್ರತ್ಯಯಗಳನ್ನು ಹೊಂದುವವು.

27. ಸಂಸ್ಕೃತದ ಅಕಾರಾಂತವಾದ ಶಬ್ದಗಳೂ ಹ್ರಸ್ವವಾದ ಎಕಾರವನ್ನು, ಈಕಾರಾಂತ ಊಕಾರಾಂತವಾದ ಶಬ್ದಗಳು ಹ್ರಸ್ವವಾದ ಇ ಉ ಕಾರಗಳನ್ನು ಪಡೆದು ಲಿಂಗಗಳು ಆಗುವವು. ಜ್ಯಾ ಮೊದಲಾದ ಏಕಾಕ್ಷರ ಶಬ್ದಗಳು ಇದ್ದಂತೆ ವಿಭಕ್ತಿಯನ್ನು ಪಡೆವುವು.

### ಪ್ರಯೋಗ:

ಅಕಾರಾಂತಕ್ಕೆ: ವಧ=ವಧೆ. ಅಭಿಲಾಷ=ಅಭಿಲಾಷೆ. ಪ್ರಶ್ನ=ಪ್ರಶ್ನೆ.

ಈಕಾರಾಂತಕ್ಕೆ: ಕುಮಾರೀ=ಕುಮಾರಿ. ಕಾವೇರೀ=ಕಾವೇರಿ. ನಾರೀ=ನಾರಿ. ಕಾಮಿನೀ=ಕಾಮಿನಿ.

ಊಕಾರಾಂತಕ್ಕೆ: ಸ್ವಯಂಭೂ=ಸ್ವಯಂಭು; ಜಂಬೂ=ಜಂಬು.

ಏಕಾಕ್ಷರಕ್ಕೆ: ಸ್ತ್ರೀ=ಸ್ತ್ರೀಗೆ; ಮಾ=ಮಾಗೆ. ಭ್ರೂ=ಭ್ರೂಗೆ (ಹುಬ್ಬು). ಜ್ಯಾ (ಭೂಮಿ).

28. ಅಕಾರಾಂತ ಶಬ್ದಗಳೂ ಇಕಾರಾಂತ ಶಬ್ದಗಳೂ ಉಕಾರಾಂತ ಶಬ್ದಗಳೂ ಋಕಾರಾಂತ ಶಬ್ದಗಳೂ, ಇದ್ದ ಹಾಗೆ, ಲಿಂಗಗಳು ಆಗುವವು. ಆದರೆ ವಿಶೇಷವಾಗಿ ಋಕಾರಾಂತಕ್ಕೆ ಆರಾದೇಶವು ಒಮ್ಮೆ ಉಂಟು. ಧಾತೃಶಬ್ದಕ್ಕೆ ತಕಾರ ವಿಧಾತೃಶಬ್ದಕ್ಕೆ ರೇಫೆ ಆಗುವದು.

### ಪ್ರಯೋಗ:

ಅಕಾರಾಂತಕ್ಕೆ: ಭುವನ, ಕರಣ, ಚರಣ.

ಇಕಾರಾಂತಕ್ಕೆ: ಗತಿ, ಪತಿ, ಬುದ್ಧಿ, ಕೃತಿ.

ಉಕಾರಾಂತಕ್ಕೆ: ಪಶು, ರಿಪು, ಸೂನು.

ಋಕಾರಾಂತಕ್ಕೆ: ಕರ್ತೃ, ನೇತೃ, ಭರ್ತೃ, ನಪ್ತೃ, (ಮರಿಮಗ).

ಆರಾದೇಶಕ್ಕೆ: ಭರ್ತೃ=ಭರ್ತಾರ, ಹೋತಾರ (ಹೋತೃ).

ತಕಾರಕ್ಕೆ: ಧಾತೃ=ಧಾತ. (ರಕ್ಷಕ).

ರಾಂತಕ್ಕೆ: ವಿಧಾತೃ=(ಬ್ರಹ್ಮ) ವಿಧಾತ್ರ. ವಿಧಾತ.

29. ಪಿತೃಶಬ್ದದ ಸ್ಥಾನಕ್ಕೆ ಅರ್ ಆದೇಶವು ಸಖಿ ಎಂಬ ಶಬ್ದಕ್ಕೆ ಅಕಾರಾದೇಶವು ಆಗುವದು.

## ಪ್ರಯೋಗ:

ಪಿತೃ ಎಂಬ ಶಬ್ದಕ್ಕೆ: ಪಿತರಂ, ಪಿತರರ್, ಪಿತ.

ಸಖಿ ಎಂಬ ಶಬ್ದಕ್ಕೆ: ಸಖಂ, ಸಖನಂ.

ಈ ಪ್ರಕಾರ ಸ್ವರಾಂತ ಸಂಸ್ಕೃತ ಶಬ್ದಗಳು ಕನ್ನಡದಲ್ಲಿ ಸೇರಿ ಲಿಂಗಗಳಾಗುವವು.

30. ಸಂಸ್ಕೃತ ವ್ಯಂಜನಾಂತ ಲಿಂಗಗಳು ಕನ್ನಡದಲ್ಲಿ ಅತ್ವವನ್ನು ಪಡೆದು, ದ್ವಿತ್ವದ ಸಂಗಡ ಉತ್ವವನ್ನು ಪಡೆದು, ಕಡೆ ಅಕ್ಷರದ ಲೋಪವನ್ನು ಪಡೆದು ಲಿಂಗಗಳು ಆಗುವವು.

Use of Sanskrit nouns terminating in consonants.

## ಪ್ರಯೋಗ:

ಅತ್ವಕ್ಕೆ: ದಿವ್=ದಿವ. ಮರುತ್=ಮರುತ.

ದ್ವಿತ್ವ ಉತ್ವಗಳಿಗೆ: ರಜ್=ರಜ್ಜು (ಹಗ್ಗ). ಅಪ್=ಅಪ್ಪು. ಕ್ಷುತ್=ಕ್ಷುತ್ತು (ಹಸಿವೆ).

ಅಂತ್ಯಲೋಪಕ್ಕೆ: ರಾಜನ್=ರಾಜ. ಪೂಷನ್=ಪೂಷ (ಸೂರ್ಯ).

ಇದಕ್ಕೆ ಅಪವಾದ: ಸೀಮನ್=ಸೀಮೆ.

ಸಕಾರಾಂತದಲ್ಲಿ ವಿಕಲ್ಪವಾಗಿ ಬರುವ ದ್ವಿತ್ವ ಉತ್ವಗಳಿಗೂ, ಅಂತ್ಯ

ಲೋಪಕ್ಕೆ: ಮನಸ್=ಮನಸ್ಸು, ಮನ. ತೇಜಸ್=ತೇಜಸ್ಸು=ತೇಜ.

ಕೆಲವು ವ್ಯಂಜನಾಂತವಾಗಿಯೆ ಇರುವವು: ವಾರ್, ವಾರಂ, ವಾರಿಂ, ವಾರ್ಗೆ, ವಾರ, ವಾರೊಳ್.

31. ಸಂಸ್ಕೃತದ ಪ್ರಥಮಾ ಬಹು ವಚನಗಳು ತಮ್ಮ ವಿಸರ್ಗವನ್ನು ಕಳೆಯಲಾಗಿ, ಕನ್ನಡದಲ್ಲಿ ಏಕ ವಚನವಾಗಿ ಲಿಂಗಗಳು ಆಗುವವು; ಇವನ್ನು ಉದಾಹರಣೆಯ ಮುಖದಿಂದ ತಿಳಿಯ ಬೇಕು.

ಪ್ರಯೋಗ:

ಸಖಾಯ:=ಸಖಾಯಂ=ಗೆಳೆಯನು. ವಿದ್ವಾಂಸ: (ವಿದ್ವಾಂಸರು)=ವಿದ್ವಾಂಸಂ. ಶ್ವಾನ:=ಶ್ವಾನಂ. ಶ್ರೀಮಂತ:=ಶ್ರೀಮಂತಂ.

ಈ ಪ್ರಕಾರ ಸಂಸ್ಕೃತದ ವ್ಯಂಜನಾಂತಗಳು ಕನ್ನಡದಲ್ಲಿ ಲಿಂಗಗಳಾಗುವವು.

Formation of the Plural with ಗಳ್.

32. ಬಹುವಚನ ವಿವಕ್ಷೆಯಾದರೆ, ವಿಭಕ್ತಿಗಳ ಮೊದಲಲ್ಲಿ ವಿಶೇಷವಾಗಿ ಗಳಾಗಮ ಸಮನಿಸುವದು; ಸರ್ವನಾಮ ಗುಣ ವಚನಗಳಲ್ಲಿ ಗಳಾಗಮಕ್ಕೆ ಆದೇಶವಾಗಿ ಅವು ಎಂದಾಗುವದು.

ಪ್ರಯೋಗ:

ಲಿಂಗಕ್ಕೆ: ಕೊಳಂಗಳ್, ತೊಡೆಗಳ್.
ಸರ್ವನಾಮಕ್ಕೆ: ಅವು, ಇವು, ಉವು.
ಗುಣವಚನಕ್ಕೆ: ಇನಿಯವು, ಮೆಲ್ಲಿದವು.

Formation of the Plural with ಇರ್, ಅರ್. etc.

33. ಗುಣವಚನದ ತುಕಾರಾಂತಕ್ಕೆ ಮೂರನೆ ಅಕ್ಷರವಾಗಿ ಅವು ಎಂಬ ಆಗಮದ ಆದಿಗೆ ಲೋಪ ಬರುವದು; ಸರ್ವನಾಮ ಗುಣವಚನಗಳಲ್ಲದ ಸ್ತ್ರೀಲಿಂಗ ಪುಲ್ಲಿಂಗದಲ್ಲಿ ಗಳೆಂಬುದಕ್ಕೆ ಆದೇಶವಾಗಿ ಇರ್, ದಿರ್, ವಿರ್, ಅರ್ ಎಂದಾಗುವದು.

## ಪ್ರಯೋಗ:

ಶ್ರುತಿಯತ್ವಕ್ಕೆ: ಅವುವಿನ ಲೋಪಕ್ಕೆ: ಒಳ್ಳಿದುವು, ತೆಳ್ಳಿದುವು, ದಟ್ಟಿದುವು. (ಒಳ್ಳಿತು.)

ಇರಾಗಮಕ್ಕೆ: ಪೆಂಡಿರ್—ತೊಳ್ತಿರ್.

ದಿರಾಗಮಕ್ಕೆ: ಇವಳ್ದಿರ್—ಅವಂದಿರ್. ಅವದಿರ್.

ವಿರಾಗಮಕ್ಕೆ: ತಂದೆವಿರ್—ತಾಯ್ವಿರ್—ಸೊಸೆವಿರ್.

## ಅರ್ ಆಗಮದ ಪ್ರಯೋಗ:

ಪುಲ್ಲಿಂಗಕ್ಕೆ: ಅರಸರ್—ಸಾಮಂತರ್—ಕೋವಿದರ್.

ಸ್ತ್ರೀಲಿಂಗಕ್ಕೆ: ದೇವಿಯರ್, ಕಾಂತೆಯರ್.

ಸಂಖ್ಯೆಗೆ: ಈರ್ವ್ವರ್, ಮೂವರ್.

ಕೃತ್ತಿಂಗೆ: ಮಾಡಿದರ್—ಬೇಡುವರ್.

ಗುಣವಚನಕ್ಕೆ: ಬಲ್ಲಿದರ್—ಒಳ್ಳಿದರ್.

ತದ್ಧಿತಕ್ಕೆ: ಮಣಿಗಾರರ್—ಕಂಚುಗಾರರ್.

ಪುಲ್ಲಿಂಗವಾದ ಅಕಾರಾಂತಕ್ಕೆ ಎಲ್ಲಿಯೂ ಲೋಪ: ಸುರರ್—ಸುರ+ಅರ್=ಸುರರ್.

34. ಪುಂಸ್ತ್ರೀಲಿಂಗದಲ್ಲಿ ಪ್ರಮಾಣವಾಚಿಗಳಲ್ಲಿಯೂ ಸಂಖ್ಯಾವಾಚಿಗಳಲ್ಲಿಯೂ ವಕಾರ ವ್ಯವಹರಿಸುವದು; ಆ ವಕಾರಕ್ಕೆ ಒಮ್ಮೆ ಬಕಾರವಾಗುವದು; ಅಕಾರಾಂತಕ್ಕೆ ವಿಕಲ್ಪದಿಂದ ಬಿಂದು ಬರುವದು; ಆ ಬಕಾರಕ್ಕೆ ಒಮ್ಮೆ ಲೋಪವಾಗುವದು. Insertion of ವ, ಬ before ಅರ್.

## ಪ್ರಯೋಗ:

ಪ್ರಮಾಣವಾಚಿಗೆ: ಎಲ್ಲವರ್.

ಸಂಖ್ಯಾವಾಚಿಗೆ: ಮೂವರ್—ನಾಲ್ವರ್.

ಬಕಾರಕ್ಕೆ: ಅನಿಬರ್—ಒರ್ಬರ್—ಇರ್ಬರ್.

ಅಕಾರಾಂತ ಬಿಂದುವಿಗೆ: ಪಲಂಬರ್—ಪಲಬರ್.

ಬಕಾರ ಲೋಪಕ್ಕೆ: ಪಲರ್—ಕೆಲರ್.

Elision of the last letter before ಅರ್.

35. ಇನಿತು ಅನಿತು ಎನಿತು ಎಲ್ಲವು ಎಂಬೀ ಪ್ರಮಾಣವಾಚಿಗಳಿಗೂ, ಕೆಲವು ಪಲವು ಎಂಬೀ ಸಂಖ್ಯಾವಾಚಿಗಳಿಗೂ, ಕಡೆಯಣ ವರ್ಣಲೋಪವಾಗುವದು.

ಪ್ರಯೋಗ:

ಅನಿತು+ಬರ್=ಅನಿಬರ್.

ಎಲ್ಲವು+ಅರ್=ಎಲ್ಲವರ್.

ಪಲವು+ಅರ್=ಪಲವರ್.

Formation of the Plural with ಅರ್ಗಳ್.

36. ಕೆಲವರಲ್ಲಿ ಅರ್ ಎಂಬ ಆಗಮಕ್ಕೆ ಕಳ್ ಎಂಬ ಆಗಮ ವಿಕಲ್ಪದಿಂದ ಬರುವದು; ಕೆಲವರಲ್ಲಿ ಅರ್ ಎಂಬ ಆಗಮ ಇಲ್ಲದಲ್ಲಿಯೂ ಕಳ್ ಎಂಬ ಆಗಮ ಬರುವದು; ಪುಂಸ್ತ್ರೀಲಿಂಗ ವಿಷಯವಾದ ಸರ್ವನಾಮಗಳಲ್ಲಿಯೂ ಅರ್ ಎಂಬ ಆಗಮದ ಮೇಲೆ ಗಳ್ ಎಂಬುದು ವಿಕಲ್ಪದಿಂದ ಬರುವದು; ದಿರ್ ವಿರ್ ಎಂಬ ಆಗಮಗಳಿಗೆ ವಿಕಲ್ಪದಿಂದ ಗಳಾಗಮ ಆದೇಶವಾಗಿ ಬರುವದು.

ಪ್ರಯೋಗ:

ಕಳಾಗಮಕ್ಕೆ: ಬುಧರ್+ಕಳ್=ಬುಧರ್ಕಳ್.

ಅರುವಿಲ್ಲದಲ್ಲಿ: ಮಕ್ಕಳ್—ನಾಡ್ಕಳ್.

ಗಳಾಗಮಕ್ಕೆ: ಅವರ್ಗಳ್—ಇವರ್ಗಳ್—ಉವರ್ಗಳ್.

ದಿರ್ಗೆ: ಅಂಣಂದಿರ್=ಅಂಣಂಗಳ್—ಭಾವಂದಿರ್=ಭಾವಂಗಳ್.

ವಿರ್ಗೆ: ಅತ್ತೆವಿರ್=ಅತ್ತೆಗಳ್—ತಾಯ್ವಿರ್=ತಾಯಿಗಳ್—ತಂದೆವಿರ್=ತಂದೆಗಳ್.

37. ಪುಂ ಸ್ತ್ರೀಲಿಂಗಗಳಾದ ಅಕಾರಾಂತಗಳಿಗೆ ಗೞ್ ಎಂಬ ದಿರ್ ಎಂಬ ಆಗಮಗಳ ಆದಿಯಲ್ಲಿ ಬಿಂದು ಹುಟ್ಟುವದು; ಆ ಬಿಂದು ಅಕಾರಾಂತ ನಪುಂಸಕಲಿಂಗದಲ್ಲಿ ವಿಕಲ್ಪವಾಗಿ ಬರುವದು; ಸಂಸ್ಕೃತ ಶಬ್ದಗಳಲ್ಲಿ ಆ ಬಿಂದು ನಿತ್ಯ. Use of the ಬಿಂದು before ಗೞ್ and ದಿರ್.

ಪ್ರಯೋಗ:

ಪುಲ್ಲಿಂಗಕ್ಕೆ: ಭಾವಂಗೞ್, ಭಾವಂದಿರ್—ಅರಸಂಗೞ್, ಅರಸಂದಿರ್.
ಸ್ತ್ರೀಲಿಂಗಕ್ಕೆ: ಅಕ್ಕಂದಿರ್, ಅಕ್ಕಂಗೞ್—ಅಮ್ಮಂದಿರ್, ಅಮ್ಮಂಗೞ್.
ನಪುಂಸಕಲಿಂಗಕ್ಕೆ: ಪೊಲಂಗೞ್, ಪೊಲಗೞ್—ಮರಂಗೞ್, ಮರಗೞ್.
ಸಂಸ್ಕೃತಕ್ಕೆ: ಗುಣಂಗೞ್—ದೇಶಂಗೞ್—ಕೋಶಂಗೞ್.
ದೋಷಕ್ಕೆ: ಗುಣಗೞ್—ದೇಶಗೞ್.

38. ಪಾತ್ರ ವಿಶೇಷವಿಲ್ಲದೆ ಪ್ರಯತ್ನವಲ್ಲದಿರುವ ಗುರುತ್ವದಲ್ಲಿಯೂ, ಗುರು ಹಿರಿಯರಾದಿ ವಿಶೇಷತ್ವದಲ್ಲಿಯೂ, ಅಸಹ್ಯವೃತ್ತಿಯಲ್ಲಿಯೂ, ಏಕವಚನಕ್ಕೆ ಬಹು ವಚನವಾಗುವದು. Use of the plural.

ಪ್ರಯೋಗ:

ಗುರುತ್ವಕ್ಕೆ: ಎಮ್ಮ ತಂದೆಗೞ್, ಎಮ್ಮ ತಾಯಿಗೞ್.
ವಿಶೇಷತ್ವಕ್ಕೆ: ಗುರುಗೞ್, ಸ್ವಾಮಿಗೞ್, ಧೊರೆಗೞ್.
ಅಸಹ್ಯವೃತ್ತಿಗೆ: ಬಡವಾದಿರ್ ಅರಸ! ಕಾಲೋೞ್.
ನಡದಪಿರ್, ಒಡನಾರುಮಿಲ್ಲ, ಕಡಲೆಗೞೆ ನಿಂ
ಮುಡಿಯೊೞಗೆ? ಪಡುವ ದೇಗುಲ
ದೆಡೆಯಾವುದು? ಕುಡದ ನಿಮಗಮೊ ಎಡರಾಯ್ತೋ?

## Formation of the Cases.

39. ಹಿಂದೆ ಹೇಳಿದ ನಾನಾ ತೆರದ ಲಿಂಗಗಳಿಗೆ ಪರವಾಗಿ ಹತ್ತುವ ನಾಮವಿಭಕ್ತಿ ಪ್ರತ್ಯಯಗಳು ಯಾವವಂದರೆ: Suffixes of the seven cases.

1.) ಮ್. 2.) ಅಮ್. 3.) ಇಮ್. 4.) ಕೆ. 5.) ಅತ್ತಣಿಂ. 6.) ಅ. 7.) ಒಳ್.

Nominative.

40. ಪ್ರಥಮೈಕ ವಚನದಲ್ಲಿ ಅಕಾರಾಂತಕ್ಕೆ ಬಿಂದುವಾಗುವದು; ಅಕಾರಾಂತವಲ್ಲದೆ ಉಳಿದ ಸ್ಥಾನಕ್ಕೆಲ್ಲ ಮ್ ಎಂಬ ಪ್ರತ್ಯಯ ಲೋಪವಾಗುವದು; ಅಕಾರಾಂತ ಪುಲ್ಲಿಂಗಕ್ಕೆ ಸ್ವರಾದಿ ವಿಭಕ್ತಿ ಪರವಾದರೆ ನಕಾರಾಗಮವಾಗುವದು.

ಪ್ರಯೋಗ:

ಬಿಂದುವಿಗೆ: ವೇದವಿದ+ಮ್=ವೇದವಿದಂ. ಮರ+ಮ್=ಮರಂ.

ಲೋಪಕ್ಕೆ: ಪುಲ್—ಕುರಿ—ಕೂಸು—ಎರಲೆ. ಇವಕ್ಕೆ ಪ್ರಥಮೈಕವಚನದ ಮ್ ಎಂಬ ಪ್ರತ್ಯಯ ಹತ್ತುವದಿಲ್ಲ.

ನಕಾರಾಗಮಕ್ಕೆ: ಅರಸ+ಉಂ=ಅರಸನುಂ, ಅರಸ+ಅಮ್=ಅರಸನಂ—ಅರಸ+ಇಮ್=ಅರಸನಿಂ—ಅರಸ+ಅತ್ತಣಿಂ=ಅರಸನತ್ತಣಿಂ. ಅರಸ+ಅ=ಅರಸನ—ಅರಸ+ಒಳ್=ಅರಸನೊಳ್.

Accusative etc. in neuter nouns terminating in the vowel ಅ.

41. ಕನ್ನಡದಲ್ಲಿ ಅಕಾರಾಂತ ನಪುಂಸಕಲಿಂಗಕ್ಕೆ ದ್ವಿತಿಯೆ ಪರವಾದರೆ, ನಕಾರ ಮಕಾರಗಳು ಆಗುವವು; ಈ ಮ ನ ಕಾರಗಳು ಒಂದು ವೇಳೆಯಲ್ಲಿ ವಕಾರವಾಗುವವು; ಸಂಸ್ಕೃತ ಶಬ್ದದಲ್ಲಿ ಮಕಾರವೇ ಸಂಬಂಧವಾಗುವದು; ತೃತಿಯೆ ಮೊದಲಾದ ಸ್ವರಾದಿ ವಿಭಕ್ತಿ ಪರವಾದರೆ, ದಕಾರಾಗಮವಾಗುವದು.

ಪ್ರಯೋಗ:

ನಕಾರಕ್ಕೆ: ಪೊಲನಂ—ನೆಲನಂ—ಬಿಲನಂ.

ಮತ್ವಕ್ಕೆ: ಬೆಟ್ಟಮಂ—ಹಳ್ಳಮಂ—ಕೊಳ್ಳಮಂ.

ಸಂಸ್ಕೃತಮತ್ವಕ್ಕೆ: ಕುಲಮಂ—ಚಲಮಂ.

ವಕಾರಕ್ಕೆ: ಮರವಂ—ಬೆಟ್ಟವಂ—ಹಳ್ಳವಂ.

ದಕಾರಾಗಮಕ್ಕೆ: ಮನ+ಇನ್=ಮನದಿಂ– ಮನ+ಅತ್ತಣಿಂ=ಮನದತ್ತಣಿಂ– ಮನ+ಅ=ಮನದ. ಮನ+ಒಳ್=ಮನದೊಳ್.

42. ಇನ್, ಇಂದಮ್, ಇಂದೆ ಎಂದು ತೃತಿಯೆ ಮೂರು ತರವಾಗಿರುವದು; ಅಕಾರಾಂತ ನಪುಂಸಕಲಿಂಗದಲ್ಲಿ ತೃತಿಯಾವಿಭಕ್ತಿಯ ಮೂರು ರೂಪಿಗೆ ವಿಕಲ್ಪದಿಂದ ಎಕಾರಾದೇಶವಾಗುವದು. Instrumental.

ಪ್ರಯೋಗ:

ಇನ್ಗೆ: ಕುರಿ+ಇನ್=ಕುರಿಯಿಂ–ಪುಲ್+ಇನ್=ಪುಲ್ಲಿಂ.
ಇಂದಮ್ಗೆ: ಭಯ+ಇಂದಮ್=ಭಯದಿಂದಂ– ಮುಳಿಸಿಂದಂ.
ಇಂದೆಗೆ: ರಾಗ+ಇಂದೆ=ರಾಗದಿಂದೆ– ಮುಳಿಸಿಂದೆ.
ಆದೇಶದ ಎಕಾರಕ್ಕೆ: ಕ್ರಮ+ಎ=ಕ್ರಮದೆ–ನಯದೆ.

43. ಉ ಊ ಎಂಬ ಸವರ್ಣದಲ್ಲಿಯೂ, ಋ ೠ ಎಂಬ ಸವರ್ಣದಲ್ಲಿಯೂ, ಒ ಓ ಎಂಬ ಸವರ್ಣದಲ್ಲಿಯೂ ಔ ಕಾರದಲ್ಲಿಯೂ, ಹ್ರಸ್ವವಾದ ಎಕಾರದಲ್ಲಿಯೂ ತೃತಿಯೆ ಮೊದಲಾದ ವಿಭಕ್ತಿಗಳಲ್ಲಿ ಇನಾಗಮದ ವಿಧಿ ತಪ್ಪದು; ವತ್ವಸಂಧಿಯ ಸ್ಥಾನದಲ್ಲಿ ವಿಕಲ್ಪವಾಗಿ ಬರುವದು. Use of the augment ಇನ್.

ಪ್ರಯೋಗ:

ಉ ಊ ಕಾರಾಂತಕ್ಕೆ: ಪೊಸು+ಇನ್=ಪೊಸಿನಿಂ– ಪೂ+ಇನ್= ಪೂವಿನಿಂ.
ಋ ೠ ಕಾರಾಂತಕ್ಕೆ: ಪಿತೃ+ಇಂದಂ=ಪಿತೃವಿನಿಂದಂ– ಪಿತೃವಿಂದಂ.
ಒ ಓ ಕಾರಾಂತಕ್ಕೆ: ಗೋ+ಇನ್=ಗೋವಿನಿಂ–ಗೋವಿನ.
ಔ ಕಾರಾಂತಕ್ಕೆ: ಗ್ಲೌ (ಚಂದ್ರ)+ಇನ್=ಗ್ಲೌವಿನಿಂ– ಗ್ಲೌವಿನ. ನೌ+ಇಂದಂ=ನೌವಿನಿಂದಂ (ನೌವಿಂದಂ)
ಎಕಾರಾಂತಕ್ಕೆ: ನಿಂನೆ+ಇನ್=ನಿಂನಿನಿಂ– ನಿನ್ನಿನ.

ಈ ಪ್ರಕಾರ ನಿಂನೆ ಮೊನ್ನೆ ನಾಳೆ ಮೊದಲಾದ ಕಾಲವಾಚಿಗಳು ರೂಪಾಂತರವಾಗುವವು.

ವತ್ವಸಂಧಿಯ ವಿಕಲ್ಪಕ್ಕೆ: ಮಡು+ಇಮ್=ಮಡುವಿಂ—ಮಡುವಿನಿಂ—ಮಡುಗೆ—ಮಡುವಿಂಗೆ. ಮಡುವ—ಮಡುವಿನ. ಮಡುವೊಳ್—ಮಡುವಿನೊಳ್; ಗುರುವಿಂ—ಗುರುವಿನಿಂ, ಗುರುಗೆ—ಗುರುವಿಂಗೆ. ಗುರುವ—ಗುರುವಿನ. ಗುರುವೊಳ್—ಗುರುವಿನೊಳ್.

Some exceptions to the above rule.

44. ಪಗಲಿರುಳೆಂಬ ವ್ಯಂಜನಾಂತ ಶಬ್ದಗಳಲ್ಲಿ ಇನಾಗಮ ವಿಕಲ್ಪದಿಂದ ಆಗುವದು; ಆಗಳೀಗಳೆಂಬ ವ್ಯಂಜನಾಂತದಲ್ಲಿ ಇನಾಗಮವು ನಿತ್ಯ; ಉಳಿದ ಸ್ಥಳದಲ್ಲಿ ಎಲ್ಲ ದೋಷ.

ಪ್ರಯೋಗ:

ವಿಕಲ್ಪಕ್ಕೆ: ಪಗಲ್+ಇಮ್=ಪಗಲಿನಿಂ. ಪಗಲಿಂ—ಇರುಳಿಂ—ಇರುಳಿನಿಂ.
ನಿತ್ಯಕ್ಕೆ: ಆಗಳ್+ಇಮ್=ಆಗಳಿನಿಂ—ಈಗಳಿನಿಂ.
ದೋಷಕ್ಕೆ: ಬೆಮರ್+ಇಮ್=ಬೆಮರಿನಿಂ (ಬೆಮರಿಂ) ಮೂಗಿನಿಂ—ಮಣಲಿನಿಂ (ಮೂಗಿಂ).

Use of the augment ಅರ್ and ಅಣ್.

45. ನಪುಂಸಕಲಿಂಗದಲ್ಲಿ ಉಕಾರಾಂತವಾದ ಕೃತ್ತಿಗೂ, ಸರ್ವನಾಮಕ್ಕೂ, ಗುಣವಚನಕ್ಕೂ, ಸಂಖ್ಯೆಗೂ, ಪ್ರಮಾಣವಾಚಿಗಳಿಗೂ ತೃತಿಯೆ ಮೊದಲಾದ ವಿಭಕ್ತಿಗಳಲ್ಲಿ ಅರಾಗಮ ಹುಟ್ಟುವದು; ದಿಗ್ವಾಚಿಕದಲ್ಲಿ ಅಣಾಗಮವಾಗುವದು.

ಪ್ರಯೋಗ:

ಭೂತಕಾಲದ ಕೃತ್ತಿಗೆ: ಮಾಡಿದುದು+ಇಮ್=ಮಾಡಿದುದರಿಂ—ಮಾಡಿದುವರಿಂ.
ಭವಿಷ್ಯಂತಿಯ ಕೃತ್ತಿಗೆ: ಬೇಡುವುದು+ಇಮ್=ಬೇಡುವುದರಿಂ—ಬೇಡುವುವರಿಂ.
ಸರ್ವನಾಮಕ್ಕೆ: ಅದು+ಇಮ್=ಅದರಿಂ ಅವು+ಇಮ್=ಅವರಿಂ.
ಗುಣವಚನಕ್ಕೆ: ಕರಿದು+ಇಮ್=ಕರಿದರಿಂ—ಕರಿದರ.
ಗುಣವಚನವಲ್ಲದಲ್ಲಿ ಉಂಟು: ಮೇಲುದು+ಇಮ್=ಮೇಲುದರಿಂ—ಮೇಲುದರ ಸೆರಗು.

ಸಂಖ್ಯೆಗೆ: ಎರಡು+ಇಮ್=ಎರಡರಿಂ—ಮೂರರಿಂ.
ಪ್ರಮಾಣವಾಚಿಗೆ: ಅನಿತು+ಇಮ್=ಅನಿತರಿಂ—ಇನಿತರಿಂ—ಎಲ್ಲ
ವು+ಇಮ್=ಎಲ್ಲವರಿಂ.
ಅಣ್ಗೆ: ಮೂಡಣಿಂ, ತೆಂಕಣಿಂ, ಪಡುವಣಿಂ, ಬಡಗಣಿಂ, ಮೇಗಣಿಂ, ಕೆಳಗಣಿಂ, ನಡುವಣಿಂ, ಕಡೆಯಣಿಂ, ಅತ್ತಣಿಂ, ಇತ್ತಣಿಂ, ಎತ್ತಣಿಂ, ಮುಂದಣಿಂ, ಪಿಂದಣಿಂ, ಮುಂತಣಿಂ, ಪಿಂತಣಿಂ, ಬಳಗಣಿಂ. ಪೊರಗಣಿಂ.

46. ಅಣಾಗಮ ಹತ್ತಿದ ದಿಗ್ವಾಚಿಕಗಳಲ್ಲಿ ಪುಲ್ಲಿಂಗವಾಗುವಲ್ಲಿ, ಅಕಾರ ಪ್ರಾಪ್ತಿಸುವದು. ಅಣಾಗಮ ಹತ್ತದ ಮಿಕ್ಕ ದಿಗ್ವಾಚಿಕಗಳಲ್ಲಿ ಅದೇ ರೀತಿಯಿಂದ ದಕಾರವಿಧಿ ವರ್ತಿಸುವದು. **Noun with ಅಣ್ and ದ.**

ಪ್ರಯೋಗ:

ಅಕಾರಕ್ಕೆ: ಮೂಡಣಂ—ಮೂಡಣನಂ—ಮೂಡಣನಿಂ.
ದಕಾರಕ್ಕೆ: ಕೆಲದಂ—ಕೆಲದನಂ—ಕೆಲದನಿಂ. ಬಲದಂ—ಇಲ್ಲಿದಂ—ಎಲ್ಲಿದಂ—ಅಲ್ಲಿದಂ—(ಅಲ್ಲಿಯವಂ).

47. ಅಕಾರಾಂತ ಪುಲ್ಲಿಂಗದಲ್ಲಿ ಪರವಾದ ಚತುರ್ಥಿಗೆ ಆದಿಯಲ್ಲಿ ಬಿಂದುವಿನ ಸಂಗಡ ಗೆ ಎಂದಾಗುವದು; ಅಕಾರಾಂತ ನಪುಂಸಕಲಿಂಗದಲ್ಲಿ ಪರವಾದ ಚತುರ್ಥಿಗೆ ವಿಕಲ್ಪದಿಂದ ದ್ವಿತ್ವ ಪ್ರಾಪ್ತಿಸುವದು; ಅಕಾರಾಂತವಲ್ಲದ ಉಳಿದ ಸ್ವರವ್ಯಂಜನಾಂತಗಳಿಗೆ ಪರವಾದ ಚತುರ್ಥಿಗೆ ಲಿಂಗವಚನವ್ಯವಸ್ಥೆ ಇಲ್ಲದೆ ಗೆ ಎಂದು ಆಗುವದು. **Dative.**

ಪ್ರಯೋಗ:

ಅಕಾರಾಂತ ಪುಲ್ಲಿಂಗಕ್ಕೆ: ಅರಸ+ಗೆ=ಅರಸಂಗೆ—ಆತಂಗೆ.
ಅಕಾರಾಂತ ನಪುಂಸಕಲಿಂಗ ದ್ವಿತ್ವವಿಕಲ್ಪಕ್ಕೆ: ಪೊಲಕ್ಕೆ—ಪೊಲಕೆ.
ಸ್ವರವ್ಯಂಜನಾಂತಗಳಿಗೆ: ಕವಿಗೆ, ತನುಗೆ, ಆಕೆಗೆ, ಪಣ್ಗೆ, ಕಣ್ಗೆ.

**Dative in the plural.**

48. ಸಂಸ್ಕೃತ ಪುಲ್ಲಿಂಗ ಸ್ತ್ರೀಲಿಂಗದ ಬಹುವಚನದಲ್ಲಿಯೂ, ವಿಶೇಷವಾಗಿ ಕನ್ನಡದ ಪುಂಸ್ತ್ರೀಲಿಂಗದಲ್ಲಿಯೂ, ಶಿಥಿಲ ವೃತ್ತಿಯಿಂದ ಚತುರ್ಥಿಗೆ ದ್ವಿತ್ವ ವಿಕಲ್ಪವಾಗಿ ಬರುವದು.

ಪ್ರಯೋಗ:

ಸಂಸ್ಕೃತಕ್ಕೆ: ಬುಧರ್+ಗೆ=ಬುಧರ್ಗೆ=ಬುಧರ್ಗ್ಗೆ. ಬಾಂಧವರ್ಗೆ—ಬಾಂಧವರ್ಗ್ಗೆ.

ಕನ್ನಡಕ್ಕೆ: ಎರವರ್ಗೆ—ಎರವರ್ಗ್ಗೆ. ಅರಸರ್ಗೆ—ಅರಸರ್ಗ್ಗೆ.

**Ablative.**

49. ಅತ್ತಣಿಂ—ಅತ್ತಣಿಂದಂ, ಅತ್ತಣಿಂದೆ ಎಂದು ಪಂಚಮಿ ಮೂರು ತರವಾಗಿರುವದು.

ಪ್ರಯೋಗ:

ಕೆರೆ+ಅತ್ತಣಿಂ=ಕೆರೆಯತ್ತಣಿಂ—ಕೆರೆಯತ್ತಣಿಂದಂ—ಕೆರೆಯತ್ತಣಿಂದೆ.

**Genitive.**

50. ಅ ಎಂಬ ಷಷ್ಠಿಯ ಅಕಾರಕ್ಕೆ ಕೆಲವರು ದೀರ್ಘಾದೇಶವನ್ನು ಹೇಳುವರು; ಅದನ್ನು ಕೆಲವರು ಖೇದದಲ್ಲಿಯೂ, ಸಂಭ್ರಮದಲ್ಲಿಯೂ ಪ್ರಯೋಗಿಸುವರು.

ಪ್ರಯೋಗ:

ಷಷ್ಠಿಯ ಅಕಾರಕ್ಕೆ: ಅರಸ+ಅ=ಅರಸನ, ಮರದ.

ದೀರ್ಘಾದೇಶಕ್ಕೆ: ಅರಸನಾ, ಮರದಾ, ಪುಲಿಯಾ.

**Augmentation of the Accusative.**

51. ಆ ದೀರ್ಘ ವ್ಯವಹೃತಿ ಶಬ್ದಾಂತರಾಳದಲ್ಲಿಯೂ, ದ್ವಿತೀಯಾ ವಿಭಕ್ತಿಗೆ ಸ್ವರ ಪರವಾದಲ್ಲಿಯೂ, ವಿಕಲ್ಪದಿಂದ ಉದ್ಭವಿಸುವದು; ಓಲ್ (ಹಾಗೆ) ಪರವಾದಲ್ಲಿಯೂ ದೀರ್ಘ ಉಂಟು.

### ಪ್ರಯೋಗ:

ಶಬ್ದಾಂತರಾಳ್ಕ್ಕೆ: ಆರೊಗಿಸಿದಂ–ಆರೋಗಿಸಿದಂ.
ದ್ವಿತೀಯೆಗೆ: ಕಲ್ಲಿನೇರಿದಂ, ಕಲ್ಲಾನೇರಿದಂ; ಮರವಾನೇರಿದಂ.
ಓಲ್ ಎಂಬುದಕ್ಕೆ: ಈದ ಪುಲಿಯಾವೋಲಿರ್ದಂ.

52. ಅಲ್ಲಿ ಎಂದೂ ಒಳ್ ಎಂದೂ ಸಪ್ತಮಿಗೆ ಸಾಮಾನ್ಯದಿಂದ ಆಗುವದು; ದಿಗ್ವಾಚಿಯಾದ ಅಕಾರಾಂತದ ಮೇಲೆ ವಿಕಲ್ಪದಿಂದ ಅಲ್ ಬರುವದು; ಉಕಾರಾಂತ ದಿಗ್ವಾಚಿಕಗಳಿಗೆ ಎಕಾರವಾಗುವದು; ಅದಂತ ನಪುಂಸಕಲಿಂಗದ ಏಕತ್ವದಲ್ಲಿ ವಿಕಲ್ಪದಿಂದ ಇ ಎಂದಾಗುವದು. Locative.

### ಪ್ರಯೋಗ:

ಒಳ್ಗೆ: ಅರಸ+ಒಳ್=ಅರಸನೊಳ್–ಮರದೊಳ್–ಮರದಲ್ಲಿ.
ವಿಕಲ್ಪದಲ್ಗೆ: ಮೂಡಲ್, ಪಡುವಲ್, ತೆಂಕಲ್, ಬಡಗಲ್, ಅತ್ತಲ್, ಇತ್ತಲ್, ಉತ್ತಲ್, ಎತ್ತಲ್.
ಎತ್ವದ ವಿಕಲ್ಪಕ್ಕೆ: ಒಳಗು, ಒಳಗೆ; ಪೊರಗು, ಪೊರಗೆ; ಪೆರಗು, ಪೆರಗೆ; ಮೇಗು, ಮೇಗೆ; ಕೆಳಗು, ಕೆಳಗೆ; ನಡುವೆ.
ಇಗೆ: ಮನ+ಇ=ಮನದಿ–ಮರದಿ, ಗುಡ್ಡದಿ, ರಣಾಂಗಣದಿ.

53. ಮುಂದು ಪಿಂದು ಎಂಬಿವರ ಅಂತ್ಯಕ್ಕೆ ವಿಕಲ್ಪದಿಂದ ತುಕಾರಾದೇಶವಾಗಿ ಹಿಂದಿನಂತೆ ಎತ್ವ ಸವನಿಸುವದು; ಮೇಲ್ ಎಂಬ ಶಬ್ದ ವ್ಯಂಜನಾಂತಕ್ಕೂ ಎತ್ವ ವ್ಯವಹರಿಸುವದು. Changes in ಮುಂದು and ಪಿಂದು.

### ಪ್ರಯೋಗ:

ಮುಂದು, ಮುಂತು, ಪಿಂದು, ಪಿಂತು, ಮುಂದೆ, ಮುಂತೆ, ಪಿಂದೆ, ಪಿಂತೆ.
ಮೇಲೆಂಬುದಕ್ಕೆ: ಆನೆಯ ಮೇಲೆಯುಂ, ಆಳ ಮೇಲೆಯುಂ.

54. ಸ್ತ್ರೀಲಿಂಗದಲ್ಲಿಯೂ ವಿಶೇಷವಾಗಿ ಬಂಧುವಾಚಿಕಗಳಲ್ಲಿ ಅಕಾರಾಂತಕ್ಕೆ ಪುಲ್ಲಿಂಗದ ಹಾಗೆ ಸಪ್ತವಿಭಕ್ತಿಗಳೆಲ್ಲ ಹತ್ತುವವು; ಗಂಡಾದ Nouns of relation-

ship and some irregular nouns. ನಪುಂಸಕ ಲಿಂಗದಲ್ಲಿಯೂ ಕೆಲವು ಸ್ಥಾನಗಳಲ್ಲಿ ಅಕಾರಾಂತಕ್ಕೆ ಪುಲ್ಲಿಂಗದ ಹಾಗೆ ಸಪ್ತವಿಭಕ್ತಿಗಳು ಹತ್ತುವವು; ಇವನ್ನು ಉದಾಹರಣೆಗಳಿಂದ ತಿಳಿಯ ಬೇಕು.

ಪ್ರಯೋಗ:

ಅದಂತ ಸ್ತ್ರೀಲಿಂಗಕ್ಕೆ: ಅಕ್ಕಂ—ಅಕ್ಕನಂ—ಅಮ್ಮಂ—ಅವ್ವಂ.
ಗಂಡಾದ ಅಕಾರಾಂತ ನಪುಂಸಕಕ್ಕೆ: ಹರಿಣಂ—ಹರಿಣನಂ. ಮುಂ. ಕೋಣ, ಕೂರ್ಮ, ಗರುಡ, ಕಮಠ (ಆವೆ) ವೃಷಭಂ, ಬಸವಂ.
ಹೆಣ್ಣಾದರೂ ಗಂಡಾದರೂ ವಿಕಲ್ಪಕ್ಕೆ: ವರಾಹ—ವರಾಹನಂ, ವರಾಹಮುಂ—ವರಾಹನಿಂ—ವರಾಹದಿಂ ಮುಂ—ಹಂಗ, ಹಸುಂಬ ಹಸುಬ (ಪಶು), ಸರ್ಪ, ಹಂಗನಂ, ಹಸುಬನಿಂ, ಸರ್ಪಂಗೆ.

Vocative. **55.** ಆಮಂತ್ರಣದಲ್ಲಿ ಸ್ವರಾಂತ ವ್ಯಂಜನಾಂತಗಳ ಪ್ರಥಮೈಕವಚನಕ್ಕೆ ಎಲ್ಲಿಯೂ ಲೋಪ; ಆ ಸಂಬುಧಿಯಲ್ಲಿ ಹ್ರಸ್ವ ದೀರ್ಘವೆಂಬೆರಡು ಕಾಕುಗಳನ್ನು ವಿಕಲ್ಪದಿಂದ ಹೇಳುವರು.

ಪ್ರಯೋಗ:

ಲೋಪಕ್ಕೆ: ದೇವ ಬಿನ್ನಪಂ ಕೇಳ್ ಅರಸ!
ಹ್ರಸ್ವಕಾಕುವಿಗೆ: ಎಲೆಗಣಪ! ಎಲೆ ತಂದೆ! ಎಲೆ ಕೂಸು!
ದೀರ್ಘಕಾಕುವಿಗೆ: ಎಲೆ ಅರಸಾ! ಎಲೆ ಮರಾ! ಎಲೆ ಕುರುಪಲೇ! ಎಲೆ ಕೋಗಿಲೇ! ಎಲೆ ಕೂಸೂ!

Vocative formed by adding ಎ ಏ to the noun. **56.** ಲಿಂಗತ್ರಯವೆನ್ನದೆ ವಚನತ್ರಯವೆನ್ನದೆ ಸ್ವರಾಂತ ವ್ಯಂಜನಾಂತಗಳೆನ್ನದೆ ಸಂಬೋಧನೆಯ ಕಡೆಯಲ್ಲಿ ವಿಕಲ್ಪದಿಂದ ಎ ಏ ಎಂಬ ಸವರ್ಣವಾಗುವದು; ಏಕತ್ವದಲ್ಲಿ ಅಕಾರಾಂತದ ಮೇಲೆ ಎ ಏ ಎಂಬಿವು ಪರವಾದರೆ, ನಡುವೆ ಬಿಂದು ಹುಟ್ಟುವದು; ಅಬಿಂದುವಾಗಿ ಎ ಏ ಎಂಬ ಸವರ್ಣ ಬಹುವಚನದ ಅರ್ ಎಂಬ ಆಗಮದ ಮೇಲೆ ಹತ್ತುವದು.

ಪ್ರಯೋಗ:

ಎ ಏ ಸವರ್ಣಕ್ಕೆ: ಕುರಿಯೆ! ಕುರಿಯೇ! ಊರೇ! ಮನುವೇ!
ಬಿಂದುವಿಗೆ: ಚಂದ್ರನೆ! ಕೊಳನೆ! ಮರಮೆ! ಗಜಮೆ! (ಗಜವೆ)!
ಅರುವಿನ ಮೇಲಣ ಏವರ್ಣಕ್ಕೆ: ಭಟ್ಟರೇ! ದೇವರೆ!
ಏಕವಚನದಲ್ಲಿ ಎತ್ವ ವಿಕಲ್ಪಕ್ಕೆ: ಎಲೆ ಅಭಿಮನ್ಯು! ಎಲೆ ತುಂಬಿ! ಎಲೆ ತುಂಬಿಯೇ!

57. ಆಮಂತ್ರಣದಲ್ಲಿ ಬಹುವಚನಗಳಾದ ಗಳ್ಗೂ ಕಳ್ಗೂ ಇರಾಗಮ ಉಂಟು; ಅರುವಿನ ಮೇಲೆಯೂ ಉಂಟು. Augment.

ಪ್ರಯೋಗ:

ಗಳ್ ಕಳ್ಗೆ: ಮುಗಿಲ್ಗಳಿರ! ಬುಧರ್ಕಳಿರಾ!
ಅರ್ಗೆ: ನೆಂಟರಿರ! ನಲ್ಲರಿರಾ!

58. ಅಮ್ ಉಮ್ ಎಂಬೀ ಸಮುಚ್ಚಯಾರ್ಥ ನಿಪಾತಗಳಲ್ಲಿ ಉಮ್ ದ್ವಿತಿಯೆಯ ನಡುವೆ ಹೊಕ್ಕು ಇರುವದು; ಅವು ಷಷ್ಟಿಯೊಳಗೆ ಹತ್ತವು; ಮಿಕ್ಕ ವಿಭಕ್ತಿಗಳ ಮೇಲೆ ಅನುರೂಪವಾಗಿ ಹತ್ತುವವು. Copulative suffixes.

ಪ್ರಯೋಗ:

ಪ್ರಥಮೆಗೆ: ಅರಸನುಂ, ಮರಮುಂ.
ದ್ವಿತಿಯೆಯೊಳಗಣ ಉಮುವಿಗೆ: ಅವರ+ಉಮ್+ಅಮ್=ಅವರುಮಂ—ಪುಲಿಯುಮಂ—ಮರಮುಮಂ.
ತೃತಿಯೆಗೆ: ದೇವರಿಂದೆಯುಂ, ಪುಲಿಯಿಂದೆಯುಂ.
ಚತುರ್ಥಿಯೊಳಗೆ ಎರಡು ಹತ್ತುವವು. ನಿನಗಂ—ನಿನಗೆಯುಂ.
ಪಂಚಮಿಗೆ: ದೇವರತ್ತಣಿಂದೆಯುಂ.
ಸಪ್ತಮಿಗೆ: ನೀರೊಳ್ಗಂ, ಎಲ್ಲಿಯುಂ, ಅಲ್ಲಿಯುಂ.

# ನಾಮಪದಗಳ ವಿಭಕ್ತಿ

1.) ಪುಲ್ಲಿಂಗ ಅಕಾರಾಂತಗಳು. (Nouns of the

ಸಂಸ್ಕೃತದವು.

| | | ಸಾಧಾರಣ ರೂಪ. | ಸಮುಚ್ಚಯಾರ್ಥರೂಪ. |
|---|---|---|---|
| ಏಕವಚನ. | ಪ್ರ. | ಬುಧಂ | ಬುಧನುಂ |
| | ದ್ವಿ. | ಬುಧನಂ, ಬುಧನಾನ್ | ಬುಧನುಮಂ |
| | ತೃ. | ಬುಧನಿಂ, ಬುಧನಿಂದಂ | ಬುಧನಿಂದೆಯುಂ |
| | ಚ. | ಬುಧಂಗೆ, ಬುಧಗೆ | ಬುಧಂಗಂ, ಬುಧಂಗೆಯುಂ, ಬುಧಗಂ |
| | ಪ. | ಬುಧನತ್ತಣಿಂ, ಬುಧನತ್ತಣಿಂದಂ | ಬುಧನತ್ತಣಿಂದೆಯುಂ |
| | ಷ. | ಬುಧನ, ಬುಧನಾ | ಅವಧಾರಣಾರ್ಥಕ್ಕೆ: ಬುಧನಯೆ |
| | ಸ. | ಬುಧನೊಳ್ | ಬುಧನೊಳಂ, ಬುಧನೊಳುಂ |
| | ಸಂ. | ಬುಧ—ಬುಧಾ—ಬುಧನೆ | |
| ಬಹುವಚನ. | ಪ್ರ. | ಬುಧರ್, ಬುಧರ್ಕಳ್ | ಬುಧರುಂ |
| | ದ್ವಿ. | ಬುಧರಂ, ಬುಧರಾನ್ | ಬುಧರುಮಂ, ಬುಧರ್ಕಳುಮಂ |
| | ತೃ. | ಬುಧರಿಂ, ಬುಧರಿಂದಂ, ಬುಧರಿಂದೆ | ಬುಧರಿಂದೆಯುಂ |
| | ಚ. | ಬುಧರ್ಗೆ, ಬುಧರ್ಕಳ್ಗೆ, ಬುಧರಿಂಗೆ | ಬುಧರ್ಗಂ, ಬುಧರ್ಗೆಯುಂ |
| | ಪ. | ಬುಧರತ್ತಣಿಂ, ಬುಧರ್ಕಳತ್ತಣಿಂದಂ | ಬುಧರತ್ತಣಿಂದೆಯುಂ |
| | ಷ. | ಬುಧರ, ಬುಧರ್ಕಳಾ | ಅವಧಾರಣಾರ್ಥಕ್ಕೆ: ಬುಧರಯೆ |
| | ಸ. | ಬುಧರೊಳ್ | ಬುಧರೊಳಂ, ಬುಧರೊಳುಂ |
| | ಸಂ. | ಬುಧರೆ, ಬುಧರ್ಕಳಿರಾ, ಬುಧರಿರ! | |

ಅರಸನು ಯೆಂಬ ನಾಮದಂತೆ ಅಮ್ಮಂ ಔವ್ವಂ ಅಕ್ಕಂ ಎಂಬೀ ಸ್ತ್ರೀಗಳಲ್ಲಿ ಬಹುವಚನದ ಅಂದಿರ್ ಎಂಬ ಆಗಮ ಬಹಳವಾಗಿ ವರ್ತಿಸುವದು.

## ರೂಪಮಾಲೆ. (Declensions.)

masculine gender terminating in the vowel ಅ.)

### ಕನ್ನಡದವು.

| ಸಾಧಾರಣ ರೂಪ. | ಸಮುಚ್ಚಾಯಾರ್ಥರೂಪ. |
|---|---|
| ಅರಸಂ | ಅರಸನುಂ |
| ಅರಸನಂ, ಅರಸನಾನ್ | ಅರಸನುಮಂ |
| ಅರಸನಿಂ, ಅರಸನಿಂದಂ | ಅರಸನಿಂದೆಯುಂ |
| ಅರಸಂಗೆ | ಅರಸಂಗಂ, ಅರಸಂಗೆಯುಂ |
| ಅರಸನತ್ತಣಿಂ, ಅರಸನತ್ತಣಿಂದಂ | ಅರಸನತ್ತಣಿಂದೆಯುಂ |
| ಅರಸನ, ಅರಸನಾ | ಅವಧಾರಣಾರ್ಥಕ್ಕೆ: ಅರಸನಯೆ |
| ಅರಸನೊಳ್ | ಅರಸನೊಳಂ, ಅರಸನೊಳುಂ |
| ಅರಸ—ಅರಸಾ—ಅರಸನೇ. | |
| ಅರಸಂಗಳ್, ಅರಸರ್ | ಅರಸಂಗಳುಂ |
| ಅರಸಂಗಳಂ, ಅರಸಂಗಳಾನ್ | ಅರಸಂಗಳುಮಂ |
| ಅರಸಂಗಳಿಂ, ಅರಸಂಗಳಿಂದಂ, ಅರಸರಿಂದೆ | ಅರಸಂಗಳಿಂದೆಯುಂ |
| ಅರಸಂಗಳ್ಗೆ, ಅರಸರ್ಗೆ | ಅರಸಂಗಳ್ಗಂ, ಅರಸಂಗಳ್ಗೆಯುಂ |
| ಅರಸಂಗಳತ್ತಣಿಂ, ಅರಸಂಗಳತ್ತಣಿಂದಂ | ಅರಸಂಗಳತ್ತಣಿಂದೆಯುಂ |
| ಅರಸಂಗಳ, ಅರಸಂಗಳಾ, ಅರಸರ | ಅವಧಾರಣಾರ್ಥಕ್ಕೆ: ಅರಸಂಗಳಯೆ |
| ಅರಸಂಗಳೊಳ್, ಅರಸರೊಳ್ | ಅರಸಂಗಳೊಳಂ |
| ಅರಸಂಗಳಿ—ಅರಸಂಗಳಿರಾ, ಅರಸಿರ! | |

ಲಿಂಗದ ಬಂಧುವಾಚಿಕಗಳು ರೂಪಾಂತರವಾಗುವವು. ಈ ಬಂಧುವಾಚಿಕ ಅಕ್ಕಂದಿರ್. ಮುಂ.

2.) ನಪುಂಸಕಲಿಂಗದ

## ಸಂಸ್ಕೃತದವು.

| | | ಸಾಧಾರಣರೂಪ. | ಸಮುಚ್ಚಯಾರ್ಥರೂಪ. |
|---|---|---|---|
| ಏಕವಚನ. | ಪ್ರ. | ಸ್ವರಂ | ಸ್ವರಮುಂ |
| | ದ್ವಿ. | ಸ್ವರಮಂ, ಸ್ವರಮೆ[1], ಸ್ವರಮಾನ್. | ಸ್ವರಮುಮಂ |
| | ತೃ. | ಸ್ವರದಿಂ, ಸ್ವರದಿಂದಂ, ಸ್ವರದಿಂದೆ | ಸ್ವರದಿಂದೆಯುಂ |
| | ಚ. | ಸ್ವರಕೆ, ಸ್ವರಕ್ಕೆ | ಸ್ವರಕ್ಕಂ, ಸ್ವರಕ್ಕೆಯುಂ |
| | ಪ. | ಸ್ವರದತ್ತಣಿಂ, ಸ್ವರದತ್ತಣಿಂದಂ, ಸ್ವರದತ್ತಣಿಂದೆ | ಸ್ವರದತ್ತಣಿಂದೆಯುಂ |
| | ಷ. | ಸ್ವರದ, ಸ್ವರದಾ | ಅವಧಾರಣಾರ್ಥಕ್ಕೆ: ಸ್ವರದಯೆ |
| | ಸ. | ಸ್ವರದೊಳ್, ಸ್ವರೆದಿ[2] | ಸ್ವರದೊಳಂ, ಸ್ವರದೊಳುಂ |
| | ಸಂ. | ಸ್ವರ, ಸ್ವರಾ | |
| ಬ. ವ. | ಪ್ರ. | ಸ್ವರಂಗಳ್, ಮುಂ. | |

ಈ ಶಬ್ದಗಳ ಬಹುವಚನವನ್ನು ಅರಸಂಗಳ್ ಎಂಬುದರಂತೆ ಮುಂ

2.) ಈ ರೂಪವೂ ಗ್ರಂಥಪ್ರಯೋಗದಲ್ಲಿ ಅದೆ.

ಅಕಾರಾಂತ ಶಬ್ದಗಳು.

## ಕನ್ನಡದವು.

| ಸಾಧಾರಣರೂಪ. | ಸಮುಚ್ಚಯಾರ್ಥರೂಪ. |
|---|---|
| ಮರಂ | ಮರಮುಂ, ಮರವುಂ |
| ಮರಮಂ, ಮರವಂ, ಮರನಂ, ಮರವಾನ್ | ಮರವುಮಂ |
| ಮರಂ, ಮರದಿಂದಂ | ಮರದಿಂದೆಯುಂ |
| ಮರಕ್ಕೆ | ಮರಕಂ, ಮರಕ್ಕೆಯುಂ |
| ಮರದತ್ತಣಿಂ, ಮುಂ. | ಮರದತ್ತಣಿಂದೆಯುಂ |
| ಮರದ, ಮರದಾ | ಅವಧಾರಣಾರ್ಥಕ್ಕೆ: ಮರದಯೆ |
| ಮರದೊಳ್, ಮರದಿ[2] | ಮರದೊಳಂ, ಮರದೊಳುಂ |
| ಮರ, ಮರಾ, ಮರನೆ, ಮರವೆ | |
| ಮರಗಳ್, ಮರಂಗಳ್, ಮುಂ. | |

ದೆ ರೂಪಿಸ ಬೇಕು. 1.) ಈ ರೂಪ ಸಹ ಗ್ರಂಥಗಳಲ್ಲಿ ವರ್ತಿಸುವದು.

3.) ಇ ಈ ಎ ಏ ಐ

| | | ಪುಲ್ಲಿಂಗ. | | ಸ್ತ್ರೀ |
|---|---|---|---|---|
| | | ಸಾಧಾರಣರೂಪ. | ಸಮುಚ್ಚಯಾರ್ಥರೂಪ. | ಸಾಧಾರಣ ರೂಪ. |
| ಏಕವಚನ. | ಪ್ರ. | ತಂದೆ | ತಂದೆಯುಂ | ಕಾಂತೆ |
| | ದ್ವಿ. | ತಂದೆಯಂ, ತಂದೆಯಾನ್ | ತಂದೆಯುಮಂ | ಕಾಂತೆಯಂ, ಕಾಂತೆಯಾನ್ |
| | ತೃ. | ತಂದೆಯಿಂ, ತಂದೆಯಿಂದೆ | ತಂದೆಯಿಂದೆಯುಂ | ಕಾಂತೆಯಿಂದಂ, |
| | ಚ. | ತಂದೆಗೆ | ತಂದೆಗಂ | ಕಾಂತೆಗೆ |
| | ಪ. | ತಂದೆಯತ್ತಣಿಂ | ತಂದೆಯತ್ತಣಿಂದೆಯುಂ | ಕಾಂತೆಯತ್ತಣಿಂದಂ |
| | ಷ. | ತಂದೆಯ, ತಂದೆಯಾ | ಅವಧಾರಣಾರ್ಥಕ್ಕೆ: ತಂದೆಯುಯೆ | ಕಾಂತೆಯ, ಕಾಂತೆಯಾ |
| | ಸ. | ತಂದೆಯೊಳ್ | ತಂದೆಯೊಳಂ, ತಂದೆಯೊಳುಂ | ಕಾಂತೆಯೊಳ್ |
| | ಸಂ. | ತಂದೆ, ತಂದೇ | | ಕಾಂತೇ |
| ಬ. ವ. | ಪ್ರ. | ತಂದೆಗಳ್ | ತಂದೆಗಳುಂ | ಕಾಂತೆಯರ್ |

ಈ ಶಬ್ದಗಳ ಬಹುವಚನವನ್ನು ಅರಸಂಗಳ್, ಬುಧರ್ ಎಂಬುದರ

ಕಾರಾಂತ ಶಬ್ದಗಳು.

| ಲಿಂಗ. | ನಪುಂಸಕಲಿಂಗ. | |
|---|---|---|
| ಸಮುಚ್ಚಯಾರ್ಥ ರೂಪ. | ಸಾಧಾರಣ ರೂಪ. | ಸಮುಚ್ಚಯಾರ್ಥ ರೂಪ. |
| ಕಾಂತೆಯುಂ | ಕುರಿ | ಕುರಿಯುಂ |
| ಕಾಂತೆಯುಮಂ | ಕುರಿಯಂ, ಕುರಿಯಾನ್ | ಕುರಿಯುಮಂ |
| ಕಾಂತೆಯಿಂದೆಯುಂ | ಕುರಿಯಿಂ | ಕುರಿಯಿಂದೆಯುಂ |
| ಕಾಂತೆಗೆಯುಂ | ಕುರಿಗೆ | ಕುರಿಗಂ |
| ಕಾಂತೆಯತ್ತಣಿಂದೆಯುಂ | ಕುರಿಯತ್ತಣಿಂ | ಕುರಿಯತ್ತಣಿಂದೆಯುಂ |
| ಅವಧಾರಣಾರ್ಥಕ್ಕೆ: ಕಾಂತೆಯಯೆ | ಕುರಿಯ, ಕುರಿಯಾ | ಅವಧಾರಣಾರ್ಥಕ್ಕೆ: ಕುರಿಯಯೆ |
| ಕಾಂತೆಯೊಳುಂ | ಕುರಿಯೊಳ್ | ಕುರಿಯೊಳಂ |
| | ಕುರಿ, ಕುರೀ, ಕುರಿಯೇ | |
| ಕಾಂತೆಯರುಂ | ಕುರಿಗಳ್ | ಕುರಿಗಳುಂ |

ಹಾಗೆ ಮುಂದೆ ರೂಪಿಸ ಬೇಕು.

4.) ಉ ಊ ಋ ೠ ಒ

| | | ಸಾಧಾರಣರೂಪ. | ಸಮುಚ್ಚಯಾರ್ಥರೂಪ. | ಸಾಧಾರಣ ರೂಪ. |
|---|---|---|---|---|
| ಏಕವಚನ. | ಪ್ರ. | ಗುರು | ಗುರುವುಂ, ಗುರುಮುಂ | ಮಡುವು |
| | ದ್ವಿ. | ಗುರುವಂ, ಗುರುಮಂ, ಗುರುವಾನ್ | ಗುರುವುಮಂ | ಮಡುವಂ, ಮಡುವಾನ್ |
| | ತೃ. | ಗುರುವಿಂ, ಗುರುವಿನಿಂದಂ | ಗುರುವಿಂದೆಯುಂ | ಮಡುವಿಂ, ಮಡುವಿನಿಂ |
| | ಚ. | ಗುರುಗೆ, ಗುರುವಿಂಗೆ | ಗುರುವಿಂಗಂ, ಗುರುವಿಂಗೆಯುಂ | ಮಡುಗೆ, ಮಡುವಿಂಗೆ |
| | ಪ. | ಗುರುವತ್ತಣಿಂ, ಗುರುವಿನತ್ತಣಿಂದಂ | ಗುರುವತ್ತಣಿಂದೆಯುಂ | ಮಡುವತ್ತಣಿಂ |
| | ಷ. | ಗುರುವ, ಗುರುವಿನಾ | ಅವಧಾರಣಾರ್ಥಕ್ಕೆ: ಗುರುವಿನಯೆ | ಮಡುವಾ, ಮಡುವಿನ |
| | ಸ. | ಗುರುವೊಳ್ | ಗುರುವಿನೊಳಂ | ಮಡುವೊಳ್ |
| | ಸಂ. | ಗುರು, ಗುರೂ, ಗುರುವೆ | | ಮಡು, ಮಡೂ |
| ಬ. ವ. | ಪ್ರ. | ಗುರುಗಳ್ | | ಮಡುಗಳ್ |
| ಅರಸಂಗಳ್ ಮುಂತಾದ ರೂಪಗಳ್ಗೆ ಹಾಗೆ ಬಹುವಚನದ ರೂಪಗಳು | | | | |

ಔ ಕಾರಾಂತ ಶಬ್ದಗಳು.

| ಸಮುಚ್ಚಯಾರ್ಥ ರೂಪ. | ಸಾಧಾರಣ ರೂಪ. | ಸಮುಚ್ಚಯಾರ್ಥ ರೂಪ. |
|---|---|---|
| ಮಡುವುಂ | ಗೋ | ಗೋವುಂ |
| ಮಡುವುಮಂ | ಗೋವಂ, ಗೋವಾನ್ | ಗೋವುಮಂ |
| ಮಡುವಿಂದೆಯುಂ | ಗೋವಿಂ, ಗೋವಿನಿಂದಂ | ಗೋವಿಂದೆಯುಂ |
| ಮಡುಗಂ | ಗೋವಿಂಗೆ | ಗೋವಿಂಗಂ |
| ಮಡುವಿನತ್ತಣಿಂದೆಯುಂ | ಗೋವಿನತ್ತಣಿಂ | ಗೋವಿನತ್ತಣಿಂದೆಯುಂ |
| ಅವಧಾರಣಾರ್ಥಕ್ಕೆ: ಮಡುವಿನಯೆ | ಗೋವಿನ, ಗೋವಿನಾ | ಅವಧಾರಣಾರ್ಥಕ್ಕೆ: ಗೋವಿನಯೆ |
| ಮಡುವಿನೊಳಂ, ಮಡುವಿನೊಳುಂ | ಗೋವಿನೊಳ್ | ಗೋವಿನೊಳಂ |
| | ಗೋವೆ | |
| | ಗೋಗಳ್, ಗೋವುಗಳ್ | |
| ಆಗುವವು. | | |

5.) ಕನ್ನಡ ವ್ಯಂಜ

| | | ಸಾಧಾರಣರೂಪ. | ಸಮುಚ್ಚಯಾರ್ಥರೂಪ. | ಸಾಧಾರಣ ರೂಪ. |
|---|---|---|---|---|
| ಏಕವಚನ. | ಪ್ರ. | ಊರ್ | ಊರುಂ | ನೇಸರ್ |
| | ದ್ವಿ. | ಊರಂ ಊರಾನ್ | ಊರುಮಂ | ನೇಸರಂ, ನೇಸರಾನ್ |
| | ತೃ. | ಊರಿಂ, ಊರಿಂದಂ | ಊರಿಂದೆಯುಂ | ನೇಸರಿಂ, ನೇಸರಿಂದಂ |
| | ಚ. | ಊರ್ಗೆ, ಊರಿಂಗೆ | ಊರ್ಗಂ, ಊರ್ಗೆಯುಂ | ನೇಸರ್ಗೆ |
| | ಪ. | ಊರತ್ತಣಿಂ, ಊರತ್ತಣಿಂದಂ | ಊರತ್ತಣಿಂದೆಯುಂ | ನೇಸರತ್ತಣಿಂ, ನೇಸರತ್ತಣಿಂದಂ |
| | ಷ. | ಊರ, ಊರಾ | ಅವಧಾರಣಾರ್ಥಕ್ಕೆ: ಊರಯೆ | ನೇಸರ, ನೇಸರಾ |
| | ಸ. | ಊರೊಳ್ | ಊರೊಳಂ, ಊರೊಳುಂ | ನೇಸರೊಳ್ |
| | ಸಂ. | ಊರ್, ಊರೆ | | ನೇಸರ್, ನೇಸರೆ |
| ಬಹುವಚನ. | ಪ್ರ. | ಊರ್ಗಳ್ | ಊರ್ಗಳುಂ | ನೇಸರ್ಗಳ್ |
| | ದ್ವಿ. | ಊರ್ಗಳಂ, ಊರ್ಗಳಾನ್ | ಊರ್ಗಳುಮಂ | ನೇಸರ್ಗಳಂ, ನೇಸರ್ಗಳಾನ್ |

ಈ ಪ್ರಕಾರವಾಗಿ ಅರಸಂಗಳ್ ಎಂಬುದರಂತೆ ಬಹುವಚನದ ರೂಪ

1.) ಈ ವ್ಯಂಜನಾಂತ ಶಬ್ದಗಳು ಹೊಸಗನ್ನಡದಲ್ಲಿ ಬಹಳವಾಗಿ ಪಾಂತರವಾಗುವವು; ಈ ಪಕ್ಷದಲ್ಲಿ ಇನಾಗಮ ಅವಕ್ಕೆ ವಿಕಲ್ಪವಾಗಿ ಬ

ನಾಂತ ಶಬ್ದಗಳು.

| ಸಮುಚ್ಚಯಾರ್ಥ ರೂಪ. | ಸಾಧಾರಣ ರೂಪ. | ಸಮುಚ್ಚಯಾರ್ಥ ರೂಪ. |
|---|---|---|
| ನೇಸರುಂ | ಕಣ್ | ಕಣ್ಣುಂ |
| ನೇಸರುಮಂ | ಕಣ್ಣಂ, ಕಣ್ಣಾನ್ | ಕಣ್ಣುಮಂ |
| ನೇಸರಿಂದೆಯುಂ | ಕಣ್ಣಿಂ, ಕಣ್ಣಿಂದಂ | ಕಣ್ಣಿಂದೆಯುಂ |
| ನೇಸರ್ಗಂ, ನೇಸರ್ಗೆಯುಂ | ಕಣ್ಗೆ | ಕಣ್ಗಂ, ಕಣ್ಗೆಯುಂ |
| ನೇಸರತ್ತಣಿಂದೆಯುಂ | ಕಣ್ಣತ್ತಣಿಂ, ಕಣ್ಣತ್ತಣಿಂದಂ | ಕಣ್ಣತ್ತಣಿಂದೆಯುಂ |
| ಅವಧಾರಣಾರ್ಥಕ್ಕೆ: ನೇಸರಯೆ | ಕಣ್ಣ, ಕಣ್ಣಾ | ಅವಧಾರಣಾರ್ಥಕ್ಕೆ: ಕಣ್ಣಯೆ |
| ನೇಸರೊಳಂ, ನೇಸರೊಳುಂ | ಕಣ್ಣೊಳ್ | ಕಣ್ಣೊಳಂ |
| | ಕಣ್ಣ್, ಕಣ್ಣೆ | |
| ನೇಸರ್ಗಳುಂ | ಕಣ್ಗಳ್ | ಕಣ್ಗಳುಂ |
| ನೇಸರ್ಗಳುಮಂ | ಕಣ್ಗಳಂ, ಕಣ್ಗಳಾನ್ | ಕಣ್ಗಳುಮಂ |

ಗಳು ಆಗುವವು.

ಉತ್ವವನ್ನು ಧರಿಸಿ ಊರು ಕಣ್ಣು ಎಂದಾಗಿ ಉಕಾರಾಂತಗಳಂತೆ ರೂರುವದು. ಊರಿನಿಂ ಊರಿಂಗೆ ಊರಿನತ್ತಣಿಂ ಊರಿನ ಊರಿನೊಳ್, ಮುಂ.

## 6.) ದು ತು ಕಾರಾಂತ

### a. ದು ಕಾರಾಂತ ಗುಣವಾಚಿಕಗಳು.

| | | ಪುಲ್ಲಿಂಗ. | ಸ್ತ್ರೀಲಿಂಗ. | ನಪುಂಸಕಲಿಂಗ. |
|---|---|---|---|---|
| ಏಕವಚನ. | ಪ್ರ. | ಕರಿಯಂ | ಕರಿಯಳ್ | ಕರಿದು |
| | ದ್ವಿ. | ಕರಿಯನಂ, ಕರಿಯನಾನ್ | ಕರಿಯಳಂ, ಕರಿಯಳಾನ್ | ಕರಿದಂ, ಕರಿದಾನ್ |
| | ತೃ. | ಕರಿಯನಿಂ, ಕರಿಯನಿಂದಂ | ಕರಿಯಳಿಂ, ಕರಿಯಳಿಂದಂ | ಕರಿದರಿಂ |
| | ಚ. | ಕರಿಯಂಗೆ | ಕರಿಯಳ್ಗೆ | ಕರಿದಕ್ಕೆ |
| | ಪಂ. | ಕರಿಯನತ್ತಣಿಂ | ಕರಿಯಳತ್ತಣಿಂ, ಕರಿಯಳತ್ತಣಿಂದಂ | ಕರಿದರತ್ತಣಿಂ |
| | ಷ. | ಕರಿಯನ, ಕರಿಯನಾ | ಕರಿಯಳ, ಕರಿಯಳಾ | ಕರಿದರ, ಕರಿದರಾ |
| | ಸ. | ಕರಿಯನೊಳ್ | ಕರಿಯಳೊಳ್ | ಕರಿದರೊಳ್ |
| | ಸಂ. | ಕರಿಯ, ಕರಿಯಾ, ಕರಿಯನೆ | ಕರಿಯಳೆ, ಕರಿಯಳೇ | ಕರಿದೆ |
| ಬಹುವಚನ. | ಪ್ರ. | ಕರಿಯರ್ | | ಕರಿಯವು. |
| | ದ್ವಿ. | ಕರಿಯರಂ, ಕರಿಯರಾನ್ | | ಕರಿಯವಂ, ಕರಿಯವಾನ್ |
| | ತೃ. | ಕರಿಯರಿಂ, ಕರಿಯರಿಂದಂ | | ಕರಿಯವರಿಂ |
| | ಚ. | ಕರಿಯರ್ಗೆ | | ಕರಿಯವಕ್ಕೆ |
| | ಪಂ. | ಕರಿಯರತ್ತಣಿಂ | | ಕರಿಯವರತ್ತಣಿಂ |
| | ಷ. | ಕರಿಯರ, ಕರಿಯರಾ | | ಕರಿಯವರ, ಕರಿಯವರಾ |
| | ಸ. | ಕರಿಯರೊಳ್ | | ಕರಿಯವರೊಳ್ |
| | ಸಂ. | ಕರಿಯರಿರ, ಕರಿಯರೆ | | ಕರಿಯವೆ |

1.) ಗುಣವಚನದ ಕಡೆಯ ದಕಾರಕ್ಕೆ ಅಕಾರಾದೇಶವಾಗುವದು; ಆ ಗುಣವಚನ ತುಕಾರಾಂತವಾದರೆ, ದಕಾರಾದೇಶ ಬರುವದು.

2.) ದು ತು ಕಾರಾಂತಗಳಲ್ಲದ ಗುಣವಚನಗಳು ಮಿಕ್ಕ ಲಿಂಗಗಳಿಗೆ ಅನುಸಾರವಾಗಿ ರೂಪಾಗುವವು.—ಪಾಳಿ—ಪಾಳಿಯಿಂ, ಅಗಲ—ಅಗಲದಿಂ, ಡೊಂಕು—ಡೊಂಕಿಂ, ಮುಂ.

3.) ದುಕಾರಾಂತದ ಹಾಗೆ ರೂಪಾಗುವವು ಯಾವವಂದರೆ:

1. ಸರ್ವನಾಮಗಳಾದ ಪೆರಂ (ಬೇರೊಬ್ಬನು) ಪೆರನಂ, ಪೆರಳ್ (ಬೇರೊಬ್ಬಳು) ಪೆರಳಂ, ಪೆರತು (ಬೇರೊಂದು) ಪೆರತಂ ಮುಂ.

2. ಪರಿಮಾಣವಾಚಿಕಗಳು: ಕೆಲಬರ್, ಕೆಲಂಬರ್, ಅರೆಬರ್ (ಕೆಲವರು) ಕೆಲಬರಂ, ಕೆಲವು—ಕೆಲವ; ಪಲಬರ್, ಪಲಂಬರ್—ಪಲಬರಂ, ಪಲವು—ಪಲವಂ; ಎಲ್ಲರ್—(ಎಲ್ಲವರ್)

ವಾದ ಗುಣವಾಚಿಕಗಳು.

### b. ತುಕಾರಾಂತ ಗುಣವಾಚಿಕಗಳು.

| ಪುಲ್ಲಿಂಗ. | ಸ್ತ್ರೀಲಿಂಗ. | ನಪುಂಸಕಲಿಂಗ. |
|---|---|---|
| ಒಳ್ಳಿದಂ | ಒಳ್ಳಿದಳ್ | ಒಳ್ಳಿತು, ಒಳ್ಳಿತ್ತು |
| ಒಳ್ಳಿದನಂ, ಒಳ್ಳಿದನಾನ್ | ಒಳ್ಳಿದಳಂ, ಒಳ್ಳಿದಳಾನ್ | ಒಳ್ಳಿತಂ, ಒಳ್ಳಿತಾನ್ |
| ಒಳ್ಳಿದನಿಂ | ಒಳ್ಳಿದಳಿಂ | ಒಳ್ಳಿತಱಿಂ |
| ಒಳ್ಳಿದಂಗೆ | ಒಳ್ಳಿದಳ್ಗೆ | ಒಳ್ಳಿತಕ್ಕೆ |
| ಒಳ್ಳಿದನತ್ತಣಿಂ | ಒಳ್ಳಿದಳತ್ತಣಿಂ | ಒಳ್ಳಿತಱತ್ತಣಿಂ |
| ಒಳ್ಳಿದನ, ಒಳ್ಳಿದನಾ | ಒಳ್ಳಿದಳ, ಒಳ್ಳಿದಳಾ | ಒಳ್ಳಿತಱ, ಒಳ್ಳಿತಱಾ |
| ಒಳ್ಳಿದನೊಳ್ | ಒಳ್ಳಿದಳೊಳ್ | ಒಳ್ಳಿತಱೊಳ್ |
| ಒಳ್ಳಿದ, ಒಳ್ಳಿದಾ, ಒಳ್ಳಿದನೆ | ಒಳ್ಳಿದಳೆ | ಒಳ್ಳಿತೆ |
| ಒಳ್ಳಿದರ್ | | ಒಳ್ಳಿದುವು (ಒಳ್ಳಿದುವುಗಳ್) |
| ಒಳ್ಳಿದರಂ, ಒಳ್ಳಿದರಾನ್ | | ಒಳ್ಳಿದುವಂ, ಒಳ್ಳಿದುವಾನ್ |
| ಒಳ್ಳಿದರಿಂ | | ಒಳ್ಳಿದುವಱಿಂ |
| ಒಳ್ಳಿದರ್ಗೆ | | ಒಳ್ಳಿದುವರ್ಗೆ |
| ಒಳ್ಳಿದರತ್ತಣಿಂ | | ಒಳ್ಳಿದುವಱತ್ತಣಿಂ |
| ಒಳ್ಳಿದರ, ಒಳ್ಳಿದರಾ | | ಒಳ್ಳಿದುವಱ, ಒಳ್ಳಿದುವಱಾ |
| ಒಳ್ಳಿದರೊಳ್ | | ಒಳ್ಳಿದುವಱೊಳ್ |
| ಒಳ್ಳಿದರಿರ, ಒಳ್ಳಿದರಿರಾ, ಒಳ್ಳಿದರೆ | | ಒಳ್ಳಿದುವೆ, ಒಳ್ಳಿದುವುಗಳಿರ. |

ಎಲ್ಲರಂ, ಎಲ್ಲವು—ಎಲ್ಲವಂ, ಅನಿತು (ಅಷ್ಟು) ಇನಿತು, ಎನಿತು—ಅನಿತಂ, ಮುಂ.; ಅನಿಬರ್ (ಅಷ್ಟರು), ಇನಿಬರ್, ಎನಿಬರ್—ಅನಿಬರಂ ಮುಂ.; ಅನಿತು ಎಂಬ ಶಬ್ದವ ತುಕಾರಕ್ಕೆ ಒಂದು ವೇಳೆಯಲ್ಲಿ ಸುಕಾರಾದೇಶ ಬರುವದು: ಅನಿಸು ಇನಿಸು ಎನಿಸು; ಅನಿತು ಎಂಬ ಶಬ್ದಕ್ಕೆ ಅಂತುಟು ಇಂತುಟು ಎಂತುಟು ಎಂದಾಗುವದು.

3. ಸಂಖ್ಯಾವಾಚಕಗಳು: ಒರ್ವಂ, ಒಬ್ಬಂ (ಒಬ್ಬ)—ಒರ್ವನಂ, ಒರ್ವಳ್—ಒರ್ವಳಂ, ಒಂದು—ಒಂದಂ ಒಂದಱಿಂ; ಇರ್ವರ್ (ಇಬ್ಬರ್) ಇರ್ವರಂ, ಎರಡು—ಎರಡಂ—ಎರಡಱಿಂ. ಮೂವರ್—ಮೂವರಂ ಮೂರ್—ಮೂರಂ, ಮೂಱಱಿಂ—ಮುಂ.

4. ಸಂಖ್ಯಾಪೂರಣಗಳು: ಒಂದನೆಯಂ, ಒಂದನೆಯಳ್—ಒಂದನೆಯದು; ಅನಿತನೆಯಂ—ಇನಿತನೆಯಂ—ಎನಿತನೆಯಂ (ಅಷ್ಟನೆಯವನು).

7.) ಸರ್ವನಾ

| | | ಉತ್ತಮ ಪುರುಷ. | | ಮಧ್ಯಮ |
|---|---|---|---|---|
| | | ಸಾಧಾರಣರೂಪ. | ಸಮುಚ್ಚಯಾರ್ಥರೂಪ. | ಸಾಧಾರಣ ರೂಪ. |
| ಏಕವಚನ. | ಪ್ರ. | ಆನ್, ಯಾನ್, ಆಂ | ಆನುಂ | ನೀನ್, ನೀಂ |
| | ದ್ವಿ. | ಎನ್ನಂ, ಎನ್ನಾನ್ | ಎನ್ನುಮಂ | ನಿನ್ನಂ, ನಿನ್ನಾನ್ |
| | ತೃ. | ಎನ್ನಿಂ, ಎನ್ನಿಂದಂ | ಎನ್ನಿಂದೆಯುಂ | ನಿನ್ನಿಂ, ನಿನ್ನಿಂದಂ |
| | ಚ. | ಎನಗೆ, ನಂಗೆ | ಎನಗಂ, ಎನಗೆಯುಂ | ನಿನಗೆ, ನಿಂಗೆ |
| | ಪ. | ಎನ್ನತ್ತಣಿಂ, ಎನ್ನತ್ತಣಿಂದಂ | ಎನ್ನತ್ತಣಿಂದೆಯುಂ | ನಿನ್ನತ್ತಣಿಂ, ನಿನ್ನತ್ತಣಿಂದಂ |
| | ಷ. | ಎನ್ನ, ಎನ್ನಯ | ಅವಧಾರಣಾರ್ಥಕ್ಕೆ: ಎನ್ನಯೆ | ನಿನ್ನ, ನಿನ್ನಯ |
| | ಸ. | ಎನ್ನೊಳ್ | ಎನ್ನೊಳಂ, ಎನ್ನೊಳುಂ | ನಿನ್ನೊಳ್ |
| ಬಹುವಚನ. | ಪ್ರ. | ಆಮ್, ಆಂ, ಆವು | ಆಮುಂ, ಆವುಂ | ನೀಮ್, ನೀಂ |
| | ದ್ವಿ. | ಎಮ್ಮಂ, ಎಮ್ಮಾನ್ | ಎಮ್ಮುಮಂ,ಎಮ್ಮುವಂ | ನಿಮ್ಮಂ, ನಿಮ್ಮಾನ್ |
| | ತೃ. | ಎಮ್ಮಿಂ | ಎಮ್ಮಿಂದೆಯುಂ | ನಿಮ್ಮಿಂ |
| | ಚ. | ಎಮಗೆ, ಎವಗೆ | ಎಮಗಂ,ಎಮಗೆಯುಂ | ನಿಮಗೆ |
| | ಪ. | ಎಮ್ಮತ್ತಣಿಂ, ಎಮ್ಮತ್ತಣಿಂದಂ | ಎಮ್ಮತ್ತಣಿಂದೆಯುಂ | ನಿಮ್ಮತ್ತಣಿಂ, ನಿಮ್ಮತ್ತಣಿಂದಂ |
| | ಷ. | ಎಮ್ಮ, ಎಮ್ಮಯ | ಅವಧಾರಣಾರ್ಥಕ್ಕೆ: ಎಮ್ಮಯೆ | ನಿಮ್ಮ, ನಿಮ್ಮಯ |
| | ಸ. | ಎಮ್ಮೊಳ್ | ಎಮ್ಮೊಳಂ, ಎಮ್ಮೊಳುಂ | ನಿಮ್ಮೊಳ್ |

ಎನತ್ತು etc.

59. ಎನ್ನದು, ನಿನ್ನದು, ತನ್ನದು ಎಂಬಿವಕ್ಕೆ ಎನತು ಎಂಬಂತೆ ಆದೇಶವಾಗುವದು–ವಿಕಲ್ಪದಿಂದ ಇವಕ್ಕೆ ದ್ವಿತ್ವ ಬರುವದು.

ಪ್ರಯೋಗ:

ಎನ್ನದು=ಎನತು=ಎನತ್ತು. ಎಮ್ಮದು=ಎಮತು=ಎಮತ್ತು.
ನಿನ್ನದು=ನಿನತು=ನಿನತ್ತು. ನಿಮ್ಮದು=ನಿಮತು=ನಿಮತ್ತು.
ತನ್ನದು=ತನತು=ತನತ್ತು. ತಮ್ಮದು=ತಮತು=ತಮತ್ತು.

ಮ ಪದಗಳು.

| ಪುರುಷ. | ಪ್ರಥಮ ಪುರುಷ. | |
|---|---|---|
| ಸಮುಚ್ಚಯಾರ್ಥ ರೂಪ. | ಸಾಧಾರಣ ರೂಪ. | ಸಮುಚ್ಚಯಾರ್ಥ ರೂಪ. |
| ನೀನುಂ | ತಾನ್, ತಾಂ | ತಾನುಂ |
| ನಿನ್ನುಮಂ, ನಿನ್ನುವಂ | ತನ್ನಂ, ತನ್ನಾನ್ | ತನ್ನುಮಂ, ತನ್ನುವಂ |
| ನಿನ್ನಿಂದೆಯುಂ | ತನ್ನಿಂ, ತನ್ನಿಂದಂ | ತನ್ನಿಂದೆಯುಂ |
| ನಿನಗಂ, ನಿನಗೆಯುಂ | ತನಗೆ | ತನಗಂ, ತನಗೆಯುಂ |
| ನಿನ್ನತ್ತಣಿಂದೆಯುಂ | ತನ್ನತ್ತಣಿಂ, ತನ್ನತ್ತಣಿಂದಂ | ತನ್ನತ್ತಣಿಂದೆಯುಂ |
| ಅವಧಾರಣಾರ್ಥಕ್ಕೆ: ನಿನ್ನಯೆ | ತನ್ನ, ತನ್ನಯ | ಅವಧಾರಣಾರ್ಥಕ್ಕೆ: ತನ್ನಯೆ |
| ನಿನ್ನೊಳಂ, ನಿನ್ನೊಳುಂ | ತನ್ನೊಳ್ | ತನ್ನೊಳಂ, ತನ್ನೊಳುಂ |
| ನೀಮುಂ, ನೀವುಂ | ತಾಮ್, ತಾಂ | ತಾಮುಂ |
| ನಿಮ್ಮುಮಂ, ನಿಮ್ಮುವಂ | ತಮ್ಮಂ, ತಮ್ಮಾನ್ | ತಮ್ಮುಮಂ, ತಮ್ಮುವಂ |
| ನಿಮ್ಮಿಂದೆಯುಂ | ತಮ್ಮಿಂ | ತಮ್ಮಿಂದೆಯುಂ |
| ನಿಮಗಂ, ನಿಮಗೆಯುಂ | ತಮಗೆ | ತಮಗಂ, ತಮಗೆಯುಂ |
| ನಿಮತ್ತಣಿಂದೆಯುಂ | ತಮ್ಮತ್ತಣಿಂ, ತಮ್ಮತ್ತಣಿಂದಂ | ತಮ್ಮತ್ತಣಿಂದೆಯುಂ |
| ಅವಧಾರಣಾರ್ಥಕ್ಕೆ: ನಿಮ್ಮಯೆ | ತಮ್ಮ, ತಮ್ಮಯ | ಅವಧಾರಣಾರ್ಥಕ್ಕೆ: ತಮ್ಮಯೆ |
| ನಿಮ್ಮೊಳಂ, ನಿಮ್ಮೊಳುಂ | ತಮ್ಮೊಳ್ | ತಮ್ಮೊಳಂ, ತಮ್ಮೊಳುಂ |

60. ಸ್ವರಾದಿ ಸಂಖ್ಯೆಗಳು ಪರವಾದರೆ, ಮೊದಲಲ್ಲಿ ಎಮ್ಮ ನಿಮ್ಮ ತಮ್ಮ ಎಂಬಿವು ಬರಲಾಗಿ, ಮಧ್ಯದಲ್ಲಿ ಉತ್ ಆಗುವದು. ಎಮ್ಮುತ್ತೀರ್ವರ್ etc.

ಪ್ರಯೋಗ:

ಎಮ್ಮುತ್ತೀರ್ವರುಂ, ನಿಮ್ಮುತ್ತೀರ್ವರುಂ, ತಮ್ಮುತ್ತೀರ್ವರುಂ, ಎಮ್ಮುತ್ತೇಳ್ವರು, ನಿಮ್ಮುತ್ತೈವರು, ತಮ್ಮುತ್ತಾರ್ವರು; ಉಚ್ಚಾರಣ ಸುಭಗವಾಗದಲ್ಲಿ ಬಿಡುವದು; ದೋಷಕ್ಕೆ: ಎಮ್ಮುತ್ತೊಂಬದಿಂಬರ್.

## ಪ್ರಥಮ ಪುರುಷದ ಸರ್ವನಾಮವಾದ ಅವಂ.

| | | ಪುಲ್ಲಿಂಗ. | | ಸ್ತ್ರೀಲಿಂಗ. | | ನಪುಂಸಕಲಿಂಗ. | |
|---|---|---|---|---|---|---|---|
| | | ಸಾಧಾರಣರೂಪ. | ಸಮುಚ್ಚಯಾರ್ಥರೂಪ. | ಸಾಧಾರಣರೂಪ. | ಸಮುಚ್ಚಯಾರ್ಥರೂಪ. | ಸಾಧಾರಣರೂಪ. | ಸಮುಚ್ಚಯಾರ್ಥರೂಪ. |
| ಏಕವಚನ. | ಪ್ರ. | ಅವಂ | ಅವನುಂ | ಅವಳ್ | ಅವಳುಂ | ಅದು | ಅದುವುಂ |
| | ದ್ವಿ. | ಅವನಂ, ಅವನಾನ್ | ಅವನುಮಂ | ಅವಳಂ, ಅವಳಾನ್ | ಅವಳುಮಂ | ಅದಂ, ಅದಾನ್ | ಅದುಮಂ |
| | ತೃ. | ಅವನಿಂ | ಅವನಿಂದೆಯುಂ | ಅವಳಿಂ | ಅವಳಿಂದೆಯುಂ | ಅದಱಿಂ | ಅದಱಿಂದೆಯುಂ |
| | ಚ. | ಅವಂಗೆ, ಅವಗೆ. | ಅವಂಗೆಯುಂ | ಅವಳ್ಗೆ | ಅವಳ್ಗೆಯುಂ | ಅದಕ್ಕೆ | ಅದಕ್ಕೆಯುಂ |
| | ಪ. | ಅವನತ್ತಣಿಂ | ಅವನತ್ತಣಿಂದೆಯುಂ | ಅವಳತ್ತಣಿಂ | ಅವಳತ್ತಣಿಂದೆಯುಂ | ಅದಱತ್ತಣಿಂ | ಅದಱತ್ತಣಿಂದೆಯುಂ |
| | ಷ. | ಅವನ, ಅವನಾ | ಅವಧಾರಣಾರ್ಥಃ ಅವನಯೆ | ಅವಳ, ಅವಳಾ | ಅವಧಾರಣಾರ್ಥಃ ಅವಳಯೆ | ಅದಱ, ಅದಱಾ | ಅವಧಾರಣಾರ್ಥಃ ಅದಱಯೆ |
| | ಸ. | ಅವನೊಳ್ | ಅವನೊಳಂ | ಅವಳೊಳ್ | ಅವಳೊಳುಂ | ಅದಱೊಳ್ | ಅದಱೊಳುಂ |
| ಬಹುವಚನ. | ಪ್ರ. | ಅವರ್, ಅವರ್ಗಳ್ ಅವದಿರು, ಅವಂದಿರ್ | | | ಅವರುಂ | ಅವು | ಅವುಂ |
| | ದ್ವಿ. | ಅವರಂ, ಅವರಾನ್ | | | ಅವರುಮಂ | ಅವಂ, ಅವಾನ್ | ಅವುಮಂ |
| | ತೃ. | ಅವರಿಂ, ಅವರಿಂದಂ | | | ಅವರಿಂದೆಯುಂ | ಅವಱಿಂ | ಅವಱಿಂದೆಯುಂ |
| | ಚ. | ಅವರ್ಗೆ, ಅವರಿಂಗೆ | | | ಅವರ್ಗಂ, ಅವರ್ಗೆಯುಂ | ಅವಕ್ಕೆ | ಅವಕ್ಕೆಯುಂ |
| | ಪ. | ಅವರತ್ತಣಿಂ, ಅವರತ್ತಣಿಂದಂ | | | ಅವರತ್ತಣಿಂದೆಯುಂ | ಅವಱತ್ತಣಿಂ | ಅವಱತ್ತಣಿಂದೆಯುಂ |
| | ಷ. | ಅವರ, ಅವರಾ | | | ಅವಧಾರಣಾರ್ಥಃ ಅವರಯೆ | ಅವಱ, ಅವಱಾ | ಅವಧಾರಣಾರ್ಥಃ ಅವಱಯೆ |
| | ಸ. | ಅವರೊಳ್ | | | ಅವರೊಳಂ | ಅವಱೊಳ್ | ಅವಱೊಳುಂ |

ಅವಂ—ಅವಳ್—ಅದು ಎಂಬೀ ಸರ್ವನಾಮಗಳ್ಗೆ ಹಾಗೆ ರೂಪಾಂತರವಾಗುವವು, ಯಾವವೆಂದರೆ:

1. ಇವಂ—ಇವಳ್—ಇದು. ಉವಂ—ಉವಳ್—ಉದು—ಉವನಂ—ಮುಂ. ಇವಳ್ ಎಂಬ ಶಬ್ದದ ಬಹುತ್ವವು ವಿಕಲ್ಪದಿಂದ ಇವಳ್ದಿರ್ ಎಂದಾಗುವದು.

2. ಈತಂ—ಆತಂ—ಊತಂ—ಈತನಂ—ಮುಂ. ಬಹುವಚನದಲ್ಲಿ ಈತಂಗಳ್ ಎಂದಾಗುವದು.—ಈ ಸರ್ವನಾಮ ಸ್ತ್ರೀಲಿಂಗದಲ್ಲಿ ಈಕೆ—ಆಕೆ—ಊಕೆ ಎಂದಾಗುವದು. ಈ ಶಬ್ದ ಏಕಾರಾಂತಗಳ್ಗಂತೆ ರೂಪಾಗುವದು. ಬಹುತ್ವದಲ್ಲಿ ಈಕೆಗಳು—ಈಕೆಯರು—ಈಕೆಯಂದಿರು ಎಂದು ವ್ಯವಹರಿಸುವದು. ಆಕೆಗೆ ಆಬೆ ಎಂದಾದೇಶವುಂಟು.

3. ಯಾವಂ, ಆವಂ (ಆವೊಂ), ಯಾವಳ್, ಆವಳ್, ಯಾವದು—ಆವದು—ಆವನಂ—ಮುಂ. ಬಹುತ್ವದಲ್ಲಿ ಯಾವರ್, ಯಾರ್—ಆರ್—ಎಂದಾಗುವದು.—ಆರದು ಎಂಬುದು ವಿಕಲ್ಪದಿಂದ ಆರ್ತುಂ ಎಂದಾಗುವದು—(ಆರ್ತೀತುರಂಗಂ?)

**61.** ಏನೆಂಬ ಸರ್ವನಾಮವು ಪ್ರಥಮೆಗೆ ಏನೆಂದೂ ಏತರೆಂದೂ ಆಗುವದು;—ಚತುರ್ಥಿಯೊಳಗೆ ಏತರ್ಕೆ ಎಂದೂ ಏಕೆ ಎಂದೂ ಆಗುವದು; ತೃತಿಯ ವೊದಲಾದವಕ್ಕೆ ಏತರ್ ಎಂದೆ ಪ್ರಕೃತಿಯಾಗುವದು.

ಪ್ರಯೋಗ:

| ಸಾಧಾರಣ ರೂಪ. | | ಸಮುಚ್ಚಯಾರ್ಥ ರೂಪ. | ಸಾಧಾರಣ ರೂಪ. | | ಸಮುಚ್ಚಯಾರ್ಥ ರೂಪ. |
|---|---|---|---|---|---|
| ಪ್ರ. | ಏನ್-ಏತರ್-ಏನಿ | ಏನುಂ-ಏನಾನುಂ | ಪ. | ಏತರತ್ತಣಿಂ | ಏತರತ್ತಣಿಂದೆಯುಂ |
| ದ್ವಿ. | ಏನಂ | ಏನುಮಂ, ಏನುವಂ | ಷ. | ಏತರ, ಏತರಾ | ಅವಧಾರಣಾರ್ಥಕ್ಕೆ: ಏತರಯೆ |
| ತೃ. | ಏತರಿಂ | ಏತರಿಂದೆಯುಂ | ಸ. | ಏತರೊಳ್ | ಏತರೊಳಂ, ಏತರೊಳುಂ |
| ಚ. | ಏತರ್ಕೆ, ಏಕೆ | ಏತರ್ಕೆಯುಂ, ಏಕಂ | | | |

## 8.) ದಿಗ್ವಾಚಿಕಗಳು.

a.) ಅಕಾರಾಂತಗಳು. b.) ಉಕಾರಾಂತಗಳು.

| ಸಾಧಾರಣರೂಪ. | | ಸಮುಚ್ಚಯಾರ್ಥರೂಪ. | ಸಾಧಾರಣರೂಪ. | ಸಮುಚ್ಚಯಾರ್ಥರೂಪ. |
|---|---|---|---|---|
| ಪ್ರ. ದ್ವಿ. ಸ. | ಮೂಡ-ಮೂಡಲ್ | ಮೂಡಲುಂ | ಪೊಱಗು, ಪೊಱಗೆ | ಪೊಱಗೆಯುಂ |
| ತೃ. | ಮೂಡಱಿಂ | ಮೂಡಱಿಂದೆಯುಂ | ಪೊಱಗಱಿಂ | ಪೊಱಗಱಿಂದೆಯುಂ |
| ಚ. | ಮೂಡಱ್ಗೆ | ಮೂಡಱ್ಗಂ | ಪೊಱಗಱ್ಗೆ | ಪೊಱಗಱ್ಗೆಯುಂ |
| ಪ. | ಮೂಡಱತ್ತಣಿಂ | ಮೂಡಱತ್ತಣಿಂದೆಯುಂ | ಪೊಱಗಱತ್ತಣಿಂ | ಪೊಱಗಱತ್ತಣಿಂದೆಯುಂ |
| ಷ. | ಮೂಡಱ, ಮೂಡಱಾ | ಅವಧಾರಣಾರ್ಥಃ ಮೂಡಱಯೆ | ಪೊಱಗಱ, ಪೊಱಗಱಾ | ಅವಧಾರಣಾರ್ಥಃ ಪೊಱಗಱಯೆ |

1.) ಇವುಗಳಂತೆ ಅಕಾರಾಂತವಾದ ಪಡುವ, ಬಡಗ, ತೆಂಕ; ಅತ್ತ, ಇತ್ತ, ಉತ್ತ, ಎತ್ತ, ಉಕಾರಾಂತವಾದ ಒಳಗು, ನಡುವು, ಕೆಳಗು, ಮೇಗು, ಪೆಱಗು (ಹಿಂದೆ), ಪಿಂದು, ಮುಂದು, ಕಡೆ ಎಂಬೀ ದಿಗ್ವಾಚಿಕಗಳಿಗೆ ವಿಭಕ್ತಿಪ್ರತ್ಯಯು ಹತ್ತಿಸ ಬೇಕು.—ಎತ್ತಣದು ಎಂಬುದಕ್ಕೆ ಎತ್ತಣ್ತು ಎಂಬಾದೇಶ ಉಂಟು.

2.) ಅಲ್ಲಿ, ಇಲ್ಲಿ, ಎಲ್ಲಿ ಎಂಬ ದಿಗ್ವಾಚಿಕಗಳು ಇಕಾರಾಂತ ಲಿಂಗಗಳಂತೆ ರೂಪಾಗುವವು. ತೃತಿಯಾ ವಿಭಕ್ತಿ ಮಾತ್ರ ಅಲ್ಲಿಂ ಎಂದಾಗುವದು; ದಿಕ್ಕಾಲವಾಚಿಕಗಳಿಗೆ ಪ್ರಥಮಾ ದ್ವಿತಿಯಾ ಸಪ್ತಮಿ ವಿಭಕ್ತಿಗಳಿಗೆ ಏಕರೂಪ.

9.) ಕಾಲವಾಚಿಕಗಳು.

| | | | | |
|---|---|---|---|---|
| ಪ್ರ. ದ್ವಿ. ಸ. | ಈಗಳ್—ಈಗ | ಈಗಳುಂ | ಅಂದು | ಅಂದುಂ |
| ತೃ. | ಈಗಳಿನಿಂ | ಈಗಳಿನಿಂದೆಯುಂ | ಅಂದಿಂ-ಅಂದಿನಿಂ | ಅಂದಿನಿಂದೆಯುಂ |
| ಚ. | ಈಗಳಿಂಗೆ | ಈಗಳಿಂಗಂ | ಅಂದಿಗೆ | ಅಂದಿಂಗೆಯುಂ |
| ಪ. | ಈಗಳಿನತ್ತಣಿಂ | ಈಗಳಿನತ್ತಣಿಂದೆಯುಂ | ಅಂದಿನತ್ತಣಿಂ | ಅಂದಿನತ್ತಣಿಂದೆಯುಂ |
| ಷ. | ಈಗಳಿನ — ಈಗಳಿನಾ | ಅವಧಾರಣಾರ್ಥಃ ಈಗಳಿನಯೆ | ಅಂದಿನ-ಅಂದಿನಾ | ಅವಧಾರಣಾರ್ಥಃ ಅಂದಿನಯೆ |

ಇದೇ ಪ್ರಕಾರ ಇಂದು, ಉಂದು, ಎಂದು, ಆಗಳ್, ಯಾವಾಗಳ್ ಎಂಬಿವು ಆಗುವವು.

## IV. (FORMATION OF COMPOUND TERMS)
## ಸಮಾಸ ಪ್ರಕರಣ.

62. ಇದ್ದದನ್ನು ಕೆಡಿಸದೆ ಹತ್ತುವ ಆಗಮಗಳು ವಿಭಕ್ತಿಯ ಸಂಗಡ ಲೋಪವಾಗುವವು; ಹಗೆಯಂತೆ ಇದ್ದದನ್ನು ಕೆಡಿಸಿ ಆದೇಶವು ಬರುವದು. In general.

ಪ್ರಯೋಗ:

ಆಗಮಕ್ಕೆ: ಮಾತಿನ ಬಲ್ಲಹಂ, ತೆಂಕಣವಂಕಂ (ಅಗಸಿಬಾಗಲು).
ಲೋಪಕ್ಕೆ: ಮಾತುವಲ್ಲಹಂ—ತೆಂಕವಂಕಂ.
ಆದೇಶಕ್ಕೆ: ಎರಡುಮೈ=ಇರ್ಮೈ—ಕಿರಿಕೊಂಬು=ಕಿರ್ಕೊಂಬು.

63. ಮುಂದಣ ಪದದಲ್ಲಿ ಅರ್ಥ ಪ್ರವರ್ತಿಸಲಾಗಿ, ತತ್ಪುರುಷ ಸಮಾಸವಾಗುವದು; ಈ ಸಮಾಸ ಏಕಾಶ್ರಯವಾಗಿರಲಾಗಿ, ಕರ್ಮಧಾರಯ ಎಂಬ ಸಮಾಸವಾಗುವದು; ಪರಪದದಲ್ಲಿ ಸಂಖ್ಯಾವಾಚಿಗಳು ನೆಲೆಗೊಂಡಿದ್ದರೆ, ದ್ವಿಗು ಎಂಬ ಸಮಾಸವಾಗುವದು. Three kinds of compound terms.

ಪ್ರಯೋಗ:

ತತ್ಪುರುಷಕ್ಕೆ: ಮಲ್ಲಿಗೆನೆನೆ, ಮಾಣಿಕಗೆಂಪು, ಮಹೀಪತಿ, ತ್ರಿದಿವಗತ
ಕರ್ಮಧಾರಯಕ್ಕೆ: ಬಲ್ಮುಗುಳ್, ದಿವ್ಯಕುಸುಮ, ನೀಲಾಂಬುದಶ್ಯಾಮ (ನೀಲ ಮೇಘದಂಥ ಕಪ್ಪು)
ದ್ವಿಗುವಿಗೆ: ಇರ್ಬಾಳ್ಗು, ತ್ರಿಗುಣ, ತ್ರಿಲೋಕ, ಪಂಚೇಂದ್ರಿಯ.

Three other kinds of compound terms.

64. ಎರಡು ಪದಗಳು ಅದಲ್ಲದೆ ಕೆಲವು ಪದಗಳು ಮತ್ತೊಂದು ಅನ್ಯ ಪದಾರ್ಥವನ್ನು ಬಯಿಸುತ್ತಿದ್ದರೆ, ಬಹುವ್ರೀಹಿ ಸಮಾಸವಾಗುವದು; ಪದಾರ್ಥಗಳ ಸಮುದಾಯವು ದ್ವಂದ್ವ ಸಮಾಸವಾಗುವದು. ಪೂರ್ವ ಪದ ಪ್ರಧಾನವಾದರೆ, ಅವ್ಯಯೀಭಾವ ಸಮಾಸವಾಗುವದು.

ಪ್ರಯೋಗ:

ಬಹುವ್ರೀಹಿಗೆ: ನಿಡುಮೂಗಿ, ಕಡುಚಾಗಿ—ಗಜೇಂದ್ರವಿಕ್ರಮಂ (=ಗಜೇಂದ್ರ ವಿಕ್ರಮವುಳ್ಳವನು.)
ದ್ವಂದ್ವಕ್ಕೆ: ದಂಪತಿ, ಮರ ಗಿಡ ಬಳ್ಳಿ ಪುಲ್ತೊಪ್ಪದರು ಪಕ್ಕಿ ಮಿಗಂಗಳ್.
ಅವ್ಯಯೀ ಭಾವಕ್ಕೆ: ಸಮಕ್ಷಂ, ಕೀಳ್ಪೊಡೆ, ಅಂಗೈ.

Changes in ಅಡಿ etc. when in compound terms.

65. ಅವ್ಯಯೀ ಭಾವದಲ್ಲಿ ಅಡಿ ಮೇಗು ಎಂಬ ಶಬ್ದಗಳ ಕಡೆಯಕ್ಕರಕ್ಕೆ ಬಿಂದುವಾಗುವದು; ಮುಂದು ಪಿಂದು ಎಂಬಿವ ಕಡೆಯಕ್ಕರಕ್ಕೆ ಲೋಪವಾಗುವದು; ಕೆಳಗೆಂಬುದಕ್ಕೆ ಕೀಳ್ ಎಂದು ಆದೇಶವಾಗುವದು; ಪೆರಗೆಂಬುದು ಆ ರೀತಿಯಿಂದ ಪಿಂತೆಂದು ಆಗುವದು.

ಪ್ರಯೋಗ:

ಅಡಿ+ಕೈ=ಅಂಗೈ, ಮೇಗು+ಕೈ=ಮೇಂಗೈ, ಮುಂದು+ಭಾಗ=ಮುಂಭಾಗ, ಪಿಂದು+ಭಾಗ=ಪಿಂಭಾಗ; ಕೆಳಗು+ಕೆರೆ=ಕೀಳ್ಕೆರೆ, ಪಿಂತೊಲಿ.

66. ಮೊದಲಲ್ಲಿ ಕಾರಕಪದವು ಪರದಲ್ಲಿ ಕ್ರಿಯಾಪದವು ಸಂಬಂಧವಾಗಿ ಅರ್ಥವ್ಯಕ್ತಿಯನ್ನು ಕೊಡಲಾಗಿ, ಕ್ರಿಯಾಸಮಾಸವಾಗುವದು; ಅಲ್ಲಿ ಸಂಸ್ಕೃತದ ಅಕಾರಾಂತಕ್ಕೆ ಬಿಂದು ನಿತ್ಯ, ಕನ್ನಡದ ಅಕಾರಾಂತಕ್ಕೂ ಉಕಾರಾಂತಕ್ಕೂ ಬಿಂದು ವಿಕಲ್ಪ. Compound terms with a noun and a verb. ಕ್ರಿಯಾಸಮಾಸ.

ಪ್ರಯೋಗ:

ಕ್ರಿಯಾಸಮಾಸಕ್ಕೆ: ಬಳೆದೊಟ್ಟಂ, ಮನೆವೊಕ್ಕಂ
ಸಂಸ್ಕೃತದ ನಿತ್ಯ ಬಿಂದುಗೆ: ಪ್ರಿಯಂ ನುಡಿದಂ, ರಂಗಂ ಬೊಕ್ಕಂ
ಕನ್ನಡದ ವಿಕಲ್ಪ ಬಿಂದುಗೆ: ಮೊಗಂ ನೋಡಿದಂ=ಮೊಗ ನೋಡಿದಂ
ಉತ್ವಕ್ಕೆ: ಮಾತುಂ ಸುಟ್ಟಿದಂ=ಮಾತು ಸುಟ್ಟಿದಂ
ಅರ್ಥವ್ಯಕ್ತಿ ಕೆಡುವಲ್ಲಿ, ಬಿಂದುವನ್ನು ಕಳೆಯಲಾಗದು: ಕರಗಂ ಬೊತ್ತಂ, ಕೆಲಸಂ ಪೊಕ್ಕಂ

67. ಪರಪದದಲ್ಲಿ ಕಾರಕಪದವು ಪೂರ್ವ ಪದದಲ್ಲಿ ಸಂಖ್ಯಾ ಸರ್ವನಾಮ ಗುಣವಚನ ಕೃತ್ಪದಗಳು ಯಾವವಾದರೂ ಇದ್ದರೆ, ಗಮಕಸಮಾಸವಾಗುವದು; ಇದರಲ್ಲಿ ಅರಿಸಮಾಸ ದೋಷವಿಲ್ಲ. Current compound terms. ಗಮಕಸಮಾಸ.

ಪ್ರಯೋಗ:

ಸಂಖ್ಯೆಗೆ: ಇಪ್ಪತ್ತೈದು—ನೂರುಪತ್ತು
ಸರ್ವನಾಮಕ್ಕೆ: ಆವ ಮಾತು—ಆವನಾಯಕಂ
ಗುಣವಚನಕ್ಕೆ: ಪಿರಿಯ ಮಗನು—ಬಿಳಿಯ ಕರ್ಬು
ಕೃತ್ತಿಂಗೆ: ಪಾಡುವ ತುಂಬಿ—ಬಂದ ಕುದುರೆ
ಅರಿಸಮಾಸ ನಿರ್ದೋಷಕ್ಕೆ: ಆವ ಭಾಷೆ—ಪೂಸಿದ ಭಸ್ಮ

68. ಗ ದ ಬ ಜ ಕಾರಾದಿ ಪದಗಳು ಪರದೊಳಗೆ ಇರಲಾಗಿ, ಪೂರ್ವ ಪದವು ಕೃತ್ತಾಗಿ (ಕೃಲ್ಲಿಂಗಾರ್ಥವಾಗಿ) ಉಕಾರಾಂತವು ಇಕಾರಾಂತವು ಆದರೆ, ಬಹಳವಾಗಿ ಬಿಂದುವಾಗುವದು. ಕೆಲವು ಶಬ್ದಗಳಲ್ಲಿ ಇಲ್ಲ. Compound terms with the root of verbs.

ಪ್ರಯೋಗ:

ಉಕಾರಾಂತಕ್ಕೆ: ಎತ್ತುಂಗೋಲ್ – ತೂಗುಂದೊಟ್ಟಿಲ್

ಇಕಾರಾಂತಕ್ಕೆ: ಸಿಡಿಯುಂದಲೆ (ಸಿಡಿಯುವ ತಲೆ)

ಕೃದಲ್ಲದಲ್ಲಿ ಬಿಂದು ಉಂಟು: ಬೆಟ್ಟುಂಬೊರೆ

ಬಿಂದುವಿಲ್ಲದಕ್ಕೆ: ಸುಡುಗಾಡು, ಇಡುಗಿಚ್ಚು, ಅಡುಗೂಳ್, ಉಡುಗೊರೆ, ತುಡುಜೊಡರ್, ಅರುಗೆರೆ.

Use of the cipher in compound terms.

69. ಕೃತ್ತಿಲ್ಲದೆ ಉದಂತಕ್ಕೂ ಅದಂತಕ್ಕೂ ಬಿಂದು ಸಂಧಿಸುವದು; ವ್ಯಂಜನ ನಕಾರ ಣಕಾರಗಳಿಗೆ ಅತ್ವವು, ಳಕಾರಕ್ಕೆ ಉತ್ವವು ಹತ್ತುತ್ತಲೆ, ಸೊನ್ನೆ ಅವತರಿಸುವದು.

ಪ್ರಯೋಗ:

ಉದಂತಕ್ಕೆ: ತಾರುಂಬಳ್ಳಿ

ಅದಂತಕ್ಕೆ: ಕಳ್ಳಂಗಡಲೆ

ನಕಾರಕ್ಕೆ: ಮಿಾನಂಬುಳ್ (ಮಿಾನಹುಳ)

ಣತ್ವಕ್ಕೆ: ಕಣ್ಣಂದೊಳಲಿ

ಳಕಾರಕ್ಕೆ: ಬೆಳ್ಳುಂಬಟ್ಟೆ

Use of the cipher in compound terms with ಪಿಡ.

70. ಪೆರಗೆಂಬುದಕ್ಕೆ ಆದೇಶವಾಗಿ ಬಂದ ಪೆಡವೆಂಬ ಶಬ್ದಕ್ಕೆ ಬಿಂದು ಬರುವದು; ಕೆಲವರು ತಡಗಾಲ್ ಎಂಬದರಲ್ಲಿ ಆಗುವ ಪ್ರಕಾರ, ಇದಕ್ಕೂ ಬಿಂದು ಆಚರಿಸುವದಿಲ್ಲ.

ಪ್ರಯೋಗ:

ಬಿಂದುವಿಗೆ: ಪೆಡಂಗೈ – ಪೆಡಂದಲೆ – ಪೆಡಂಮೆಟ್ಟು

ಅಬಿಂದುವಿಗೆ: ಪೆಡಗೈ – ತಡಗಾಲ್ – ಪೆಡದಲೆ

Compound terms mixed with sanscrit and canarese words.

71. ಪುರಾತನ ಕವಿಗಳಿಂದ ಸಂದುವಳಿಯಾದ ಅರಿಸಮಾಸಗಳನ್ನು ಅಲ್ಲದೆ, ಬೇರೆ ಮಾಡಲಾಗದು; ಅವನ್ನು ಬಿರುದಾವಳಿಯಲ್ಲಿ ಗುಣದಲ್ಲಿ ಹೇಳುತ್ತಾರೆ.

ಪ್ರಯೋಗ:

ಸಂದುವಳಿಯಾದದಕ್ಕೆ: ಅರಸು ಕುಮಾರಂ—ಕಡುರಾಗಂ—ಕೂರಸಿ—ತುರಗದಳಂ—ಮಂಗಳಾರತಿ—ಅರಸು ಗುಣಂ—ಕಡುದರ್ಪಂ.

ಬಿರುದಿಗೆ: ಗಜಪೋರು—ಗಜದುಳಿ

ಗುಣಕ್ಕೆ: ದಳಮುಖ್ಯ—ನಲ್ಲಪ್ರಾಣೇಶ

Rule about ಮಹತ್ and ಎಲ್ಲ in compound terms.

72. ಮಹಚ್ಛಬ್ದಕ್ಕೆ ಮಾ ಎಂಬಾದೇಶ ಹುಟ್ಟುವದು; ಎಲ್ಲ ಎಂಬ ಶಬ್ದಕ್ಕೆ ವಿಕಲ್ಪದಿಂದ ಸಮಾಸದಲ್ಲಿ ದೀರ್ಘ ವಿಧಿ ಸಮನಿಸುವದು; ಇವಕ್ಕೆ ಸಂಸ್ಕೃತ ಪದಪರವಾಗಿ ಅರಿಸಮಾಸವಾದರೂ, ದೋಷವಿಲ್ಲ.

ಪ್ರಯೋಗ:

ಮಾಸಾವಂತಂ—ಎಲ್ಲರತ್ನ—ಎಲ್ಲಾರತ್ನ. ಮಾಗೆಲಸಂ. ಮಾರಾಜಂ.

Compound terms called ತತ್ಪುರುಷ, dependent compound terms.

73. ತತ್ಪುರುಷಕ್ಕೆ ಬಹುಳದಿಂದ ಕೆಲವು ಸ್ಥಳಗಳಲ್ಲಿ ಮೊದಲ ಪದದ ಅಕ್ಕರಕ್ಕೆ ಲೋಪವು; ಕೆಲವು ಸ್ಥಳಗಳಲ್ಲಿ ಲೋಪದ ಸಂಗಡ ಉಚಿತಾಕ್ಷರಾಗಮವು ಬರುವದು; ಕೆಳಗೆಂಬುದಕ್ಕೆ ಕೀಳೆಂದೂ ಕಿನೆಂದೂ ಆದೇಶ ಆಗುವದು.

ಪ್ರಯೋಗ:

ಪದಾಂತ್ಯ ಲೋಪಕ್ಕೆ: ತೆಂಗು+ಗಾಳಿ=ತೆಂಗಾಳಿ—ಅರಸು+ಮನೆ=ಅರಮನೆ. ಬಳಕೋಂಟೆ.

ಉಚಿತಾಕ್ಷರಾಗಮಕ್ಕೆ: ಮಾವು+ಕಾಯಿ=ಮಾಂಗಾಯಿ, ದಾವು+ಗುಡಿ=ದಾಂಗುಡಿ. ಆವು+ಕೊಳಂ=ಆಂಗೊಳಂ.

ಲೋಪವಿಲ್ಲದೆ ಉಚಿತಾಕ್ಷರಾಗಮಕ್ಕೆ: ನಟ್ಟಿವನೆ (ನಟ್ಟ+ಮನೆ). ಇಲ್ಲಿ ಎಕಾರ ಉಚಿತವು.

ಕೆಳಗೆಂಬುದರ ಆದೇಶಕ್ಕೆ: ಕೀಳ್ಗೊಂಬು–ಕೀಳ್ಗಣಿ–ಕಿನ್ನೆಲಂ, ಕಿನ್ನೀರ್.

ಕರ್ಮಧಾರಯ, determinative compound terms etc.

74. ಕರ್ಮಧಾರಯಕ್ಕೂ, ದ್ವಿಗುವಿಗೂ, ದ್ವಂದ್ವಕ್ಕೂ, ಕ್ರಿಯಾಸಮಾಸಕ್ಕೂ ಪೂರ್ವಪದದ ಕಡೆ ಅಕ್ಷರಕ್ಕೆ ಲೋಪವಾಗುವದು.

ಪ್ರಯೋಗ:

ಕರ್ಮಧಾರಯಕ್ಕೆ: ಬಡವು+ನಡು=ಬಡನಡು. ಎಲ್ಲಾ ಗುಣವಾಚಿಗಳಲ್ಲಿ ಹೀಗೆ ವರ್ತಿಸುವದು.

ದ್ವಿಗುವಿಗೆ: ಪಲವು+ದಿವಸಂ=ಪಲದಿವಸಂ. ಕೆಲವು+ವರುಷಂ=ಕೆಲವರುಷಂ.

ದ್ವಂದ್ವಕ್ಕೆ: ತಮ್ಮ ತಮ್ಮ ರಾಜ್ಯಂ=ತಂತಮ್ಮ ರಾಜ್ಯಂ.

ಕ್ರಿಯಾಸಮಾಸಕ್ಕೆ: ಪೋಗು+ತಂದಂ=ಪೋತಂದಂ. ಕೆಳಗು+ಸಾರ್ದಂ=ಕೆಳಸಾರ್ದಂ–ಏನೇವೆಂ=ಏನು ಮಾಡಲಿ.

ಐದು+ತಂದಂ=ಐತಂದಂ–ಏನಂ+ವೇಳ್ವೆಂ=ಏವೇಳ್ವೆಂ. ಏತಕ್ಕೆ ಬಂದಂ=ಏವಂದಂ.

75. ಪರ ಪದವು ವಿಶೇಷ್ಯವಾಗಿದ್ದರೆ, ಪೂರ್ವಪದದ ಉಪಾಂತ್ಯಸ್ವರಕ್ಕೆ ಲೋಪ ಸಂಧಿಸುವದು; ಪದಾದಿಯ ಇಕಾರಕ್ಕೆ ಬಹುಳದಿಂದ ಎಕಾರದ ವಿಧಿ ಬರುವದು.

ಪ್ರಯೋಗ:

ಉಪಾಂತಸ್ವರದ ಲೋಪಕ್ಕೆ: ತೆಳ+ಬಸುರು=ತೆಳ್ವಸುರು–ಬಳ್ನುಡಿ–ಬಲ್ಮುಗುಳ್–ಮೆಲ್ಲಡಿ.

ಎತ್ವಕ್ಕೆ: ಪಿರ್+ಮರ=ಪೇರ್ಮರ, ಬೆಳ್ದಿಂಗಳ್—ಬೆಳ್ಮುಗಿಲ್.
ಬಹುಳಕ್ಕೆ: ಬಿಣ್ಗೊನೆ—ಬಿಣ್ವೊರೆ—ಇಂವಮಾವು.

76. ಸ್ವರಪರವಾದರೆ, ಪದಾದಿಯ ಹ್ರಸ್ವಕ್ಕೆ ದೀರ್ಘವಾಗುವದು; ಪೂರ್ವಪದಾಂತ್ಯದಲ್ಲಿ ಣ ಟ ಳ ನ ತ ಎಂಬೀ ಅಕ್ಷರಗಳು ಇರಲಾಗಿ, ದ್ವಿತ್ವವಾಗುವದು.

ಪ್ರಯೋಗ:

ದೀರ್ಘಕ್ಕೆ: ಪೆರ್ (ಪಿರ್=ಪೆರ್)+ಅಡವಿ=ಪೇರಡವಿ, ಒರ್ (=ಒಂದು)+ಅಡಿ=ಓರಡಿ. ಇರ್ (=ಎರಡು)+ಐದು=ಈರೈದು. ಇರ್+ಆರು=ಈರಾರು. ಬಹಳವಾಗಿ ವ್ಯಂಜನ ಪರವಾದಲ್ಲಿಯೂ ದೀರ್ಘವಾಯಿತು: ಇನ್+ಚರ=ಈಂಚರ (ಸವಿಸ್ವರ). ಈಂಬುಳಿ. ಈಂಗಡಲು—ಈಂದುಟಿ.

ದ್ವಿತ್ವಕ್ಕೆ: ನುಣ್+ಅರಸಿನಂ=ನುಣ್ಣರಿಸಿನಂ—ಕಟು+ಆಯ=ಕಟ್ಟಾಯ—ನಿಟ್ಟಿಸಳ್—ಕಟ್ಟಿಳೆ, ಒಳ್+ಆನೆ=ಒಳ್ಳಾನೆ—ಬಳ್ಳಾನೆ—ಒಳ್ಳರಸು. ಇನ್+ಉಣಿಸು=ಇನ್ನುಣಿಸು. ಇನ್ನೂಟ. ಕಿತ್ (=ಕಿರಿ)+ಅಡಿ=ಕಿತ್ತಡಿ—ಕುತ್ತಡಿ—ಕುತ್ತೆಸಳ್—ತುತ್ತತುದಿ—ಮೊತ್ತಮೊದಲು—ಕಟ್ಟಕಡೆ.

77. ಸ್ವರಪರವಾದರೆ, ಕಡಿದು ನಿಡಿದು ನಡು ಎಂಬಿವುಗಳ ಡಕಾರಕ್ಕೆ ಟಕಾರವಾಗುವದು; ಕಿರಿದೆಂಬ ರಕಾರಕ್ಕೂ, ಕುರು (ಸಣ್ಣ) ಎಂಬ ರಕಾರಕ್ಕೂ, ವ್ಯಂಜನ ತಕಾರವಾಗುವದು; ವ್ಯಂಜನ ಪರವಾದಲ್ಲಿ, ಇವಕ್ಕೆ ಉಕಾರವಾಗುವದು.

Letters changed in ಕಡಿದು etc.

ಪ್ರಯೋಗ:

ಟಕಾರಕ್ಕೆ: ಕಡಿ+ಆಳ್=ಕಟ್ಟಾಳ್. ನಿಡಿ+ಅಡಕಿಲ್=ನಿಟ್ಟಡಕಿಲ್. ನಡು+ಇರಳು=ನಟ್ಟಿರುಳ್.

ತಕಾರಕ್ಕೆ: ಕಿರಿ+ಅಡಿ=ಕಿತ್ತಡಿ– ಕಿರಿ+ಎಸಳ್=ಕಿತ್ತೆಸಳ್–ಕುರು+ಅಡಿ=ಕುತ್ತಡಿ.

ಉತ್ವಕ್ಕೆ: ಕಡಿ+ಕುದುರೆ=ಕಡುಗುದರೆ– ನಿಡಿ+ಪಯಣಂ=ನಿಡುವಯಣಂ– ಕಿರಿ+ಕೂಸು=ಕಿರುಗೂಸು

Changes in ಪಚ್ಚನೆ etc.

78. ಪಚ್ಚನೆ ಕೆಚ್ಚನೆ ಬೆಚ್ಚನೆ ಎಂಬೀ ಶಬ್ದಗಳಿಗೆ ಸಮಾಸದಲ್ಲಿ ಅ ಸ್ವರವು ಪರವಾದರೆ, ಅವುಗಳ ಚಕಾರಕ್ಕೆ ಮಕಾರವಾಗುವದು; ಕೆಚ್ಚನೆಯಾದಿಯ ಕಕಾರಕ್ಕೆ ಒಮ್ಮೆ ಚಕಾರವಾಗುವದು; ಈ ಶಬ್ದಗಳ ಕಡೆಯ ಮಕಾರಕ್ಕೆ ಸುಕಾರವು, ಆದಿಯ ಎತ್ವಕ್ಕೆ ಇತ್ವವು ಆಗುವದು.

ಪ್ರಯೋಗ:

ಮಕಾರಕ್ಕೆ: ಪಮ್+ತಳಿರ್=ಪಂದಳಿರ್, ಕೆಂಗರಿ, ಬೆಂಬೂದಿ, ಕೆಂಬಿಸಲ್, ಕೆಂಬಟ್ಟೆ, ಕೆಂಮಿಾನ

ಚಕಾರಕ್ಕೆ: ಚೆಮ್+ಪೊನ್ನು=ಚೆಂಬೊನ್ನು, ಚೆಂದೆಂಗು. (ಚೆಮ್=ಕೆಟ್ಟನೆ.)

ಇತ್ವದ ಕೂಡೆ ಸುಕಾರಕ್ಕೆ: ಕಿಸುಸಂಜೆ, ಬಿಸುಗದಿರ್, ಬಿಸುಗಾಳಿ, ಪಸುಂಗರಿ

ಸ್ವರಪರವಾದರೆ: ಪಚ್ಚೆಲೆ, ಬೆಚ್ಚುರಿ, ಕೆಚ್ಚನೆ ಎಂಬುದಕ್ಕೆ ಕೇಸ ಎಂದಾಗುವದು: ಕೇಸಕ್ಕಿ–ಕೇಸುರಿ

Double consonants after ರ.

79. ಸಮಾಸದಲ್ಲಿಯೂ ಸಮಾಸವಲ್ಲದಲ್ಲಿಯೂ ರೇಫೆ ಧರಿಸಿದ ಅಕ್ಷರಕ್ಕೆ ದ್ವಿತ್ವವಾಗುವದು.

ಪ್ರಯೋಗ:

ಸಮಾಸಕ್ಕೆ: ಕಾರ್+ಕಾಲಿ=ಕಾರ್ಗ್ಗಾಲ– ನೀರ್ಗ್ಗಿರ್ಚ್ಚು–ಊರ್ವ್ವೇಲಿ (ಊರ ಬೇಲಿ). ನೀರ್ಚ್ಚಂಬು

ಅಸಮಾಸಕ್ಕೆ: ನೀರ್+ತಳಿದುದು=ನೀರ್ತ್ತಳಿದುದು– ಬೇರ್+ಪರಿದುದು=ಬೇರ್ಪ್ಪರಿದುದು

80. ಅನ್ಯೋನ್ಯವಾದ ಕ್ರಿಯೆಯಿಂದ ಯುದ್ಧ ಮಾಡುವಲ್ಲಿ ಬಹುವ್ರೀಹಿ ಆಗುವದು; ಅದರ ಮೊದಲ ಪದದ ಕಡಿಗೆ ಆತ್ವವು ಪರ ಪದದ ಕಡೆಗೆ ಇತ್ವವು ಆಗುವದು.

Possessive compound terms denoting war etc.

ಪ್ರಯೋಗ:

ಖಡ್ಗದಿಂದ ಮಾಡುವ ಯುದ್ಧಕ್ಕೆ: ಖಡ್ಗಾಖಡ್ಗಿ—ಮುಷ್ಟಾಮುಷ್ಟಿ—ಹೊಲ್ಲಾಹೊಲ್ಲಿ=ಬೈದಾಟ—ದೆಬ್ಬಾದೆಬ್ಬಿ—ಧಳಾಧಳಿ—ಹಣಾಹಣಿ—ಘುಟ್ಟಾಘುಟ್ಟಿ—ಮಲ್ಲಾಮಲ್ಲಿ

81. ಬಹುವ್ರೀಹಿಯ ಕಡೆಯೊಳಗೆ ಬಹಳವಾಗಿ ಅಕಾರವೂ, ಕೆಲವು ಸ್ಥಲಗಳಲ್ಲಿ ಇಕಾರವೂ ಆಗುವದು; ಪರದಲ್ಲಿ ಇಲ್ಲ ಎಂಬರ್ಥವಾದರೆ, ಕಡೆ ಅಕ್ಷರಕ್ಕೆ ಲಿಕಾರವಾಗುವದು; ಸಂಸ್ಕೃತ ನಾಮಗಳೆಲ್ಲಾ ತಮ್ಮ ತಮ್ಮ ಲಿಂಗವನ್ನು ಬಿಟ್ಟು, ತಾವು ಕೂಡುವ ನಾಮದ ಲಿಂಗ ಧರಿಸಿ ಬಹುವ್ರೀಹಿಗಳು ಆಗುವವು.

Possessive compound terms.

ಪ್ರಯೋಗ:

ಅತ್ವಕ್ಕೆ: ಕುಡುವಿಲ್ಲಂ=ಕುಡುಬಿಲ್ಲಿನವನು=ಕೇಸಡಿಯಂ=ಕೆಂಪು ಕಾಲುಳ್ಳವನು.

ಇತ್ವಕ್ಕೆ: ಕಡುಗೆಲಸಿ—ನಿಡುಮೂಗಿ. ಕೊಲ್ ಎಂಬುದು ಕುಲಿ ಎಂದಾಗುವದು: ಮೀಂಗುಲಿ (ಮೀನ ಕೊಲ್ಲುವವನು.)

ಲಿಕಾರಕ್ಕೆ: ಪಲ್ಲಿಲಿವಾಯ್=ಹಲ್ಲಿಲ್ಲದ ಬಾಯಿ—ಕೂರಿಲಿ ಕುಡುಗೋಲ್=ಹರಿಯದ ಕುಡುಗೋಲ್ ಬೆಳಗಿಲಿಗಣ್=ಬೆಳಗಿಲ್ಲದ ಕಣ್ಣು.

ಸಂಸ್ಕೃತದ ಬಹುವ್ರೀಹಿಗೆ: ಅಮೃತಾನುಭವಂ=ಅಮೃತಾನುಭವವುಳ್ಳವನು—ಕಡುಶೋಭಂ—ಪಾಪಭರಿತಂ, ಪಾಪಭರಿತನಂ—ಪಾಪಭರಿತಳ್—ಮೂಲವ್ಯಾಧಿ=ಮೂಲವ್ಯಾಧಿಯುಳ್ಳವನು.—ಮೂಲವ್ಯಾಧಿಯಂ=ಮೂಲವ್ಯಾಧಿಯುಳ್ಳವನನ್ನು.

Compound terms with numbers.

82. ಒಂದೆಂಬುದಕ್ಕೆ ಓರಾದೇಶವು, ಎರಡೆಂಬುದಕ್ಕೆ ಇರಾದೇಶವು ದೊರೆಕೊಳ್ಳುವದು; ವ್ಯಂಜನ ಪರವಾದರೆ, ಮೂರೆಂಬುದರ ಕಡೆಯಕ್ಕರಕ್ಕೆ ಲೋಪವಾಗುವದು; ಕವರ್ಗ ಪವರ್ಗಗಳು ಪರವಾದರೆ, ದ್ವಿತ್ವವೂ, ಮೊದಲಿಗೆ ಹ್ರಸ್ವವೂ, ಸ್ವರ ಪರವಾದರೆ, ಮೂರೆಂಬುದಕ್ಕೆ ಮೂಯ್ಯಾದೇಶವು ಆಗುವದು; ನಾಲ್ಕೈದೆಂಬಿವುಗಳ ಕಡೆಯಕ್ಕರಕ್ಕೆ ಲೋಪ; ಆರು ಎಂಬುದರ ಆದಿಗೆ ಹ್ರಸ್ವ; ಎಂಟರ ಕಡೆಗೆ ಲೋಪ; ಸಾಸಿರಂ ಪರದೊಳಿರಲಾಗಿ, ಪತ್ತಕ್ಕೆ ಪಯಿನೆಂದಾದೇಶವು;—ನೂರಕ್ಕೂ ಸಾಸಿರಕ್ಕೂ ಸ್ವರ ವ್ಯಂಜನವೆನ್ನದೆ ಯಾವವು ಪರವಾದರೂ, ಅಂತ್ಯ ಲೋಪವಾಗುವದು.

ಪ್ರಯೋಗ:

ಒಂದಕ್ಕೆ: ಓರ್ನ್ನುಡಿ–ಓರ್ಪ್ಪೆಸರ್; — ಎರಡಕ್ಕೆ: ಇರ್ಕ್ಕಟ್ಟು–ಇರ್ತ್ತಡಿ.
ಮೂರಕ್ಕೆ: ಮೂಕೋಗಿಲೆ; ಮುಕ್ಕುಪ್ಪೆ, ಮುಪ್ಪೊೞಲ್, ಮುಮ್ಮಾರು, ಮುಜ್ಜೋಟು, (ಗೇಣು), ಮೂಯ್ಯಡಿ.
ನಾಲ್ಕೈದಕ್ಕೆ: ನಾಲ್ವಡಿ, ನಾಲ್ವೆರಲ್; ಐಸಾಸಿರ, ಐಕ್ಕಟ್ಟು, ಐವೊಗ.
ಆರೆಂಟಕ್ಕೆ: ಅರುವತ್ತು, ಅರುನೂರು, ಅರುದಿಂಗಳ್, ಎಣ್ದೆಸೆ, ಎಣ್ಛಾಸಿರ.
ಹತ್ತಕ್ಕೆ: ಪಯಿಂಛಾಸಿರ. ಪದಿನೆಂಟು, ಪನ್ನೊಂದು, ಪದಿಮೂರು.
ನೂರ್ಸಾಸಿರಕ್ಕೆ: ನೂರ್ಮ್ಮಡಿ, ನೂರಾಳ್ಗು—ಸಾಸಿರ್ವನಿತೆಯರ್, ಸಾಸಿರೂರು.

## V. (DERIVATIVE WORDS.) ತದ್ಧಿತಪ್ರಕರಣ.

ಈಗಿನವರ ಪ್ರಯೋಗದಲ್ಲಿ ವರ್ತಿಸದ ತದ್ಧಿತ ಪ್ರತ್ಯಯಗಳ ವಿವರವು.

The affixes ವಳ, ಆಯ್ತ etc.

83. ಇವನು ಈ ಪ್ರಯೋಜನವನ್ನು ನಡಿಸುವಾತನು ಎಂಬಲ್ಲಿ ವಳ ವಳ್ಳ ಆಯ್ತ ಪ್ರತ್ಯಯಗಳು ಆಗುವವು; ಇವನು ಇದನ್ನು ಇಕ್ಕುವವನು ಎಂಬಲ್ಲಿ ವಡಿಗ ಪ್ರತ್ಯಯ ಹತ್ತುವದು.

ಪ್ರಯೋಗ:

ವಳ, ವಳ್ಳ ಪ್ರತ್ಯಯಕ್ಕೆ: ಮಡಿವಳಂ–ಮಡಿವಳ್ಳಂ.
ಆಯ್ತಕ್ಕೆ: ಕಲ್ಲಾಯ್ತ=ಕಲ್ಲುಕುಟಿಗನು.
ವಡಿಗಕ್ಕೆ: ಹೂವಡಿಗಂ (=ಹೂವಿಡುವವನು)–ಕುಂಚವಡಿಗಂ.

84. ಮುಂದೆ ಗಾರ ಪ್ರತ್ಯಯ ಇರಲಾಗಿ, ಪೂರ್ವದ ಉದಂತಕ್ಕೆ ಬಿಂದು ಸಲ್ಲುವದು; ಅದಲ್ಲದೆ ಅಕಾರ ಸಲ್ಲುವದು; ಅದರೊಳಗೆ ಅವನು ಹುಟ್ಟಿದನೆಂಬಲ್ಲಿ ಇಚಪ್ರತ್ಯಯವನ್ನು ಹೇಳುವರು; ವಿಶೇಷವಾಗಿ ಉಪಧೆಗೆ ಹ್ರಸ್ವವಾಗುವದು. The affixes: ಗಾರ, ಇಚ.

ಪ್ರಯೋಗ:

ಬಿಂದುವಿಗೆ: ಪಾಡು+ಗಾರ=ಪಾಡುಂಗಾರ.
ಅತ್ವಕ್ಕೆ: ಕಂಚು+ಗಾರ=ಕಂಚಗಾರ.
ಇಚಪ್ರತ್ಯಯಕ್ಕೆ: ಪೊಳಲು+ಇಚ=ಪೊಳಲಿಚನು.
ಅದರಲ್ಲಿ ಉಪಧೆಹ್ರಸ್ವಕ್ಕೆ: ಕಾಲೂರು+ಇಚ=ಕಾಲುರಿಚಂ (ಭಿಕ್ಷುಕ).

85. ಇವನು ಇದರಲ್ಲಿ ಘನವಾಗಿ ಪ್ರವರ್ತಿಸುವನು ಎಂಬರ್ಥದಲ್ಲಿ ಗ ಕುಟಿಗ ಪ್ರತ್ಯಯಗಳು ಉಂಟಾಗುವವು; ಇವನು ಇದರಲ್ಲಿ ಅನುಕೂಲವಾಗಿ ಬಾಳುವನು ಎಂಬಲ್ಲಿ ಉಳಿಗ, ವಣಿಗ, ಆಯಿಲ ಪ್ರತ್ಯಯಗಳು ಆಗುವವು. The affixes ಉಳಿಗ, etc.

ಪ್ರಯೋಗ:

ಗ ಪ್ರತ್ಯಯಕ್ಕೆ: ಮಾತುಗಂ, ನಾರುಗ–ಊರುಗಂ.
ಕುಟಿಗ ಪ್ರತ್ಯಯಕ್ಕೆ: ಕಲ್ಕುಟಿಗಂ–ನೀರ್ಕುಟಿಗಂ–ಮರಕುಟಿಗಂ.
ಉಳಿಗ ಪ್ರತ್ಯಯಕ್ಕೆ: ಮಣ್ಣುಳಿಗಂ=ಮಣ್ಣು ತಿನ್ನುವಂಥವನು=ಸರ್ಪನು.
ವಣಿಗ ಆಯಿಲ ಪ್ರತ್ಯಯಗಳಿಗೆ: ಕೂಳ್ವಣಿಗಂ–ಸಾಲವಣಿಗಂ–ಪಚ್ಚಾಯಿಲ=ರತ್ನ ಮಾರುವವನು.

*The affixes ಗುಳಿ etc.*

86. ಯಾವದಾನೊಂದು ಶೀಲಗ್ರಹಣಾರ್ಥದಲ್ಲಿ ಪೂರ್ವದ ಬಿಂದುಗೂಡಿ ಗುಳಿ–ಆಳಿ–ಕುಳಿ–ಉಕ–ಅಟಿಗ ಪ್ರತ್ಯಯಗಳು ಒದಗುವವು; ಇದನ್ನು ಹಿತದಿಂದ ಉಂಬನೆಂಬಲ್ಲಿ ಉಣಿಪ್ರತ್ಯಯ ಬರುವದು.

ಪ್ರಯೋಗ:

ಗುಳಿ ಪ್ರತ್ಯಯಕ್ಕೆ: ಆಟಂಗುಳಿ–ಲಂಚಂಗುಳಿ–ಸಾಲಂಗುಳಿ.
ಆಳಿಗೆ: ಮಾತಾಳಿ–ಏರಾಳಿ. ಕುಳಿಗೆ: ಆಡುಕುಳಿ–ಪೆಂಕುಳಿ.
ಉಕಕ್ಕೆ: ಕಟ್ಟುಕಂ. ಅಟಿಗಕ್ಕೆ: ಮಾವಟಿಗಂ, ಕೊಲ್ಲಟಿಗಂ.
ಉಣಿಪ್ರತ್ಯಯಕ್ಕೆ: ಅಮರ್ದುಣಿ (ಅಮೃತ ಉಣ್ಣುವವನು) ತುಡುಗುಣಿ.

*Rule about ಓಲೆ.*

87. ಹೋಲಿಸುವಲ್ಲಿ ಓಲೆಂಬುದು ಅಂತೆಂಬುದು ಸಲುವಳಿಯಾದವು; ಅಂತೆ ವೊಲೆಂಬೆರಡನ್ನು ಒಂದು ಮಾಡಿ ಹೇಳಿದರೂ, ಪುನರುಕ್ತಿದೋಷವಿಲ್ಲ; ಓಲೆಂಬುದು ವಿಕಲ್ಪದಿಂದ ಹ್ರಸ್ವವಾಗುವದು; ಅದಂತಕ್ಕೆ ಮುಂದೆ ವಕಾರವು ಬಿಂದುವಿನ ಕೂಡಾ ಬಕಾರವಾಗುವದು.

ಪ್ರಯೋಗ:

ಜಲನಿಧಿಯಾವೋಲ್ ಗಂಭೀರಂ–ಪರಾಕ್ರಮಿ ಸಿಂಹದಂತೆ ವೋಲ್.
ಬಿಂದು ಬೆರಸಿದ ಬಕಾರಕ್ಕೆ: ನರಂ+ಓಲ್=ನರಂಬೋಲ್–ಚಂದ್ರಂಬೊಲ್

*Ordinal numbers and multiplicative numbers.*

88. ಅನಿತಿನಿತೆನಿತೆಂಬ ಪ್ರಮಾಣಪೂರಣದಲ್ಲಿಯೂ, ಸಂಖ್ಯಾಪೂರಾಣದಲ್ಲಿಯೂ, ಅನೆಯ ಪ್ರತ್ಯಯ ಹತ್ತುವದು; ಎಣಿಸುವ ಸೂಳೊಳಗೆ ಮೆ ಎಂಬುದು ಆಗುವದು.

ಪ್ರಯೋಗ:

ಅನೆಯ ಪ್ರತ್ಯಯಕ್ಕೆ: ಅನಿತನೆಯಂ–ಇನಿತನೆಯಂ–ಎನಿತನೆಯಂ; ಮೂರನೆಯಂ
ಮೆಗೆ: ಒರ್ಮೆ–ಇರ್ಮೆ–ಸಾಸಿರ್ಮೆ–ಪಲರ್ಮೆ



## VI. (VERBS) ಆಖ್ಯಾತ ಪ್ರಕರಣ.

89. ಆಖ್ಯಾತದಲ್ಲಿ ವರ್ತಿಸುವ ಪ್ರಥಮ ಮಧ್ಯಮ ಉತ್ತಮ ಪುರುಷಗಳಿಗೆ ಅಮ್, ಅಳ್, ಉದು, ಅರ್, ಉವು,—ಅಯ್, ಇರ್,—ಎನ್, ಎವು ಎಂಬೀ ವಿಭಕ್ತಿಗಳು ಏಕ ಬಹುವಚನಗಳಲ್ಲಿ ಬೇರೆ ಬೇರೆ ಹತ್ತುವವು; ಉತ್ತಮ ಪುರುಷದ ಎನ್, ಎವು ಎಂಬಲ್ಲಿ ಕೆಲವರಿಂದ ಬಿಂದುವಾಗುವದು. ಉದು, ಉವು ಎಂಬಿವು ನಿಷೇಧದಲ್ಲಿ ಅದು ಅವು ಎಂದಾಗುವವು. Affixes for the persons.

### ಪ್ರಯೋಗ:

ಪ್ರಥಮ ಪುರುಷಕ್ಕೆ: ನಡೆದಂ, ನಡೆದಳ್, ನಡೆದುದು, ನಡೆದರ್, ನಡೆದುವು. ಬಾಳ್ದದು, ಬಾಳ್ದವು.

ಮಧ್ಯಮ ಪುರುಷಕ್ಕೆ: ನಡೆದಯ್—ನಡೆದಿರ್—ಬಾಳ್ದಯ್—ಬಾಳ್ದಿರ್.

ಉತ್ತಮ ಪುರುಷಕ್ಕೆ: ನಡೆದೆನ್, ನಡೆದೆಂ,—ನಡೆದೆವು—ನಡೆದೆಂ—ಕೋಂಟೆಯುಂ ಪತ್ತುವೆಂ—ನಾನ್ ಕೇಳ್ವೆಂ

90. ಗುಣವಚನದಲ್ಲಿಯೂ, ಸರ್ವನಾಮದಲ್ಲಿಯೂ, ಸಂಖ್ಯಾವಾಚಿಯಲ್ಲಿಯೂ, ಸಂಸ್ಕೃತ ಗುಣೋಕ್ತಿಗಳಲ್ಲಿಯೂ, ಆಖ್ಯಾತ ಪ್ರತ್ಯಯಗಳು ವರ್ತಿಸುವವು.—ಸಮುಚ್ಚಯದಿಂದ ಗುಣವಚನವಲ್ಲದಲ್ಲಿಯೂ ಈ ಪ್ರಯೋಗ ಉಂಟು. ಪುರುಷ ಸ್ತ್ರೀ ವಿಷಯದೊಳಗೆ ಬಹುವಚನದ ಗಳಾಗಮಕ್ಕೆ ಆದೇಶವಾಗಿ ಬಂದ ಅರ್ ಎಂಬುದು ಮಧ್ಯಮ ಪುರುಷದ ಇರೆಂಬ ಆಖ್ಯಾತ ವಿಭಕ್ತಿಯ ಆದಿಯಲ್ಲಿಯೂ ಉತ್ತಮ ಪುರುಷದ ಎವು ಎಂಬ ಆಖ್ಯಾತ ವಿಭಕ್ತಿಯ ಆದಿಯಲ್ಲಿಯೂ ಕನ್ನಡದಲ್ಲಿ ವಿಕಲ್ಪದಿಂದ ಹತ್ತುವದು. ಆದರೆ ಸಂಸ್ಕೃತ ಗುಣವಚನದಲ್ಲಿ ಅದು ನಿತ್ಯ. ಏಕವಚನದಲ್ಲಿ ಉತ್ತಮ ಪುರುಷದ ಎನು ಎಂಬ ಆಖ್ಯಾತ ವಿಭಕ್ತಿಯ ಆದಿಗೆ ನತ್ವವಾಗುವದು. These personal affixes used in adjectives etc.

## ಪ್ರಯೋಗ:

| | ಗುಣವಚನಕ್ಕೆ. | | ಸರ್ವನಾಮಕ್ಕೆ. | | ಸಂಖ್ಯಾವಾಚಿಗೆ. | |
|---|---|---|---|---|---|---|
| ಪುರುಷ. | ಸಾಧಾರಣರೂಪ. | ವಿಕಲ್ಪ ರೂಪ. | ಸಾಧಾರಣರೂಪ. | ವಿಕಲ್ಪ ರೂಪ. | ಸಾಧಾರಣರೂಪ. | ವಿಕಲ್ಪ ರೂಪ. |
| ಏಕವಚನ. ನಾನು | ಒಳಿದೆನ್ | ಒಳಿದನೆನ್ | ಪೆರೆನ್ | ಪೆರನೆನ್ | ಒವ್ವೇನ್ | ಒವ್ವೇನೆನ್ |
| ನೀನು | ಒಳಿದಯ್ | | ಪೆರಯಿ್ | | ಒವ್ವೇಯ್ | |
| ಅವನು | ಒಳಿದಂ | | ಪೆರಂ | | ಒವ್ವೇಂ | |
| ಬಹುವಚನ. ನಾವು | ಒಳಿದೆವು | ಒಳಿದರೆವು | ಪೆರೆವು | ಪೆರರೆವು | ಒವ್ವೇವು | ಒವೇರೆವು |
| ನೀವು | ಒಳಿದಿರ್ | ಒಳಿದರಿರ್ | ಪೆರಿರ್ | ಪೆರರಿರ್ | ಒವ್ವೀರ್ | ಒವ್ವೇರಿರ್ |
| ಅವರ್ | ಒಳಿದರ್ | | ಪೆರರ್ | | ಒವ್ವೇರ್ | |

1.) ಈ ವಿಕಲ್ಪ ರೂಪಗಳು ಸಂಸ್ಕೃತ ಗುಣವಾಚಿಯಲ್ಲಿ ನಿತ್ಯ.— ಗುಣವಚನವಲ್ಲದಲ್ಲಿಯೂ ಈ ಪ್ರಯೋಗ ಉಂಟು: ಕವಿಕೇಶವನೆಂ= ನಾನು ಕವಿಕೇಶವನಿರುತ್ತೇನೆ. ಪೆಂಡತಿಯೆಂ. ದೌಹಿತ್ರನೆಂ.

Affixes of the tenses.

**91.** ದ, ದಪ, ವ ಎಂಬಿವು ಹೋದ ವರ್ತಿಸುವ ಬರುವ ಕಾಲತ್ರಯಗಳಿಗೆ ಸೂಚಿಕವಾಗಿ ಪುರುಷತ್ರಯದ ವಿಭಕ್ತಿಯ ಮೊದಲಲ್ಲಿ ಹತ್ತುವವು; ವ್ಯಂಜನಾಂತ ಧಾತುಗಳು ವಿಕಲ್ಪದಿಂದ ಉಕಾರಾಂತಗಳಾಗಿ ದ, ದಪಗಳ ಆದಿಗೆ ಇಕಾರಾಗಮ ಧರಿಸುವವು; ಭವಿಷ್ಯಂತಿಯ ವಕಾರಕ್ಕೆ ಅದು ಬರುವದಿಲ್ಲ; ದಪ ಕಾರಕ್ಕೆ ವಿಕಲ್ಪದಿಂದ ದ್ವಿತ್ವವಾಗುವದು: ಕರೆದಪಂ=ಕರೆದಪ್ಪಂ.

## ಪ್ರಯೋಗ:

ದ ದಪ ವ ಕಾರಗಳಿಗೆ: ಬಾಳ್ದಂ, ಬಾಳ್ದಪಂ, ಬಾಳ್ವಂ.— ಇಕಾರಾಗಮಕ್ಕೆ: (ಧಾತು: ಬಾಳು). ಬಾಳಿದಂ, ಬಾಳಿದಪಂ, ಬಾಳುವಂ.

92. ನಪುಂಸಕಲಿಂಗದೇಕವಚನಕ್ಕೆ ಇತು, ಇತ್ತು, ಅತ್ತು ಎಂದು ಆಗುವದು; ಅತ್ತು ಎಂಬುದು ಬಂದರೆ, ದತ್ವ ನಿತ್ಯ ಬರುವದು.

Third person singular of the neuter gender past tense.

ಪ್ರಯೋಗ:

ಇತುಗೆ: ಮುಟ್ಟಿತು.—ಇತ್ತುಗೆ: ಓಡಿತ್ತು, ಅಲ್ಲಾಡಿತ್ತು.—ಅತ್ತುಗೆ: ಇರ್ದ್ದತ್ತು, ಪಸರಿಸಿದತ್ತು, ಓದತ್ತು, ಮೇದತ್ತು.

93. ಭೂತಕಾಲವೆನ್ನದೆ ಲಿಂಗತ್ರಯವೆನ್ನದೆ ವಚನತ್ರಯವೆನ್ನದೆ ವರ್ತಮಾನ ಭವಿಷ್ಯತ್ಕಾಲಗಳಿಗೆ ಆದ ಗುಂ ಕುಂ ಎಂಬಿವು ಪ್ರಥಮ ಪುರುಷದಲ್ಲಿ ಸಲ್ಲುವವು; ಇಸು ಪ್ರತ್ಯಯದ ಸುಕಾರಕ್ಕೆ ಕುಂ ಪರವಾದರೆ, ಲೋಪವಾಗುವದು; ಕೆಲವರು ಕುಮಿಗೆ ದ್ವಿತ್ವವನ್ನು ಹೇಳುವರು; ಶ್ರಾವ್ಯವಾದಲ್ಲಿ, ಅದು ಸಲ್ಲುವದು.

Use of the affixes ಗುಂ and ಕುಂ.

ಪ್ರಯೋಗ:

ಭೂತಕಾಲಕ್ಕೆ: ಅಂದು ಅವಂ ಮಾಡುಗುಂ.—ವರ್ತಮಾನಕಾಲಕ್ಕೆ: ಇಂದು ಅವರ್ ಮಾಡುಗುಂ.

ಭವಿಷ್ಯತ್ಕಾಲಕ್ಕೆ: ಯೆಂದು ಅವರ್ ಮಾಡುಗುಂ, ನಾಳೆ ಅವಂ ಕಾದುಗುಂ.

ಲಿಂಗತ್ರಯಕ್ಕೆ: ಆಕೆ ಬಿಸುಸುಯ್ಗುಂ—ಅವಂ ನುಡಿಗುಂ—ಕೋಗಿಲೆ ಉಲಿಗುಂ.

ವಚನತ್ರಯಕ್ಕೆ: ಈರ್ವರು ನುಡಿಗುಂ—ಮೂವರು ಪೇಳ್ಗುಂ,

ಕುಂ ಎಂಬುದು ಅದರಂತೆ ಸಲ್ಲುವದು: ನುಂಗುಕುಂ, ಬರ್ಕುಂ.

ಸುಕಾರದ ಲೋಪಕ್ಕೆ: ಭಾವಿಸುಗುಂ=ಭಾವಿಕುಂ.—ದ್ವಿತ್ವಕ್ಕೆ: ಭಾವಿಕ್ಕುಂ, ಪೊಗಳಿಕ್ಕುಂ, ರಂಜಿಕ್ಕುಂ.

ಶ್ರಾವ್ಯವಲ್ಲದದಕ್ಕೆ: ಕೆಡಿಸುಗು=ಕೆಡಿಕ್ಕುಂ ಎನ ಬೇಡ. ಬಿಡಿಕ್ಕು=ಬಿಡಿಸುಗುಂ, ಆಗುಗುಂ=ಅಕ್ಕುಂ, ಪೋಗುಗುಂ=ಪೋಕುಂ—ಬರ್ಕುಂ=ಬಕ್ಕುಂ, ಬಕ್ಕು.

Formation of the imperative.

94. ಪ್ರಥಮ ಪುರುಷದ ಏಕವಚನಕ್ಕೂ, ಬಹುವಚನಕ್ಕೂ, ವಿಧ್ಯರ್ಥದಲ್ಲಿ ಗೆಕಾರ ಕೆಕಾರಗಳು ಹಿತವಾಗುವವು; ಕುವಿನಂತೆ ದ್ವಿತ್ವವಿಕಲ್ಪ; ಮಧ್ಯಮೋತ್ತಮ ಪುರುಷಗಳ ಬಹುವಚನಕ್ಕೆ ಯುಗಪದುಕ್ತಿಯಲ್ಲಿ ಕ್ರಮದಿಂದ ಇಮ್ ಅಮ್ ಎಂದಾಗುವದು. ಧಾತು ಸ್ವರೂಪದಿಂದ ಮಧ್ಯಮ ಪುರುಷದೇಕವಚನವು ವಿಧ್ಯರ್ಥವಾಗಿ ಪರಿಣಮಿಸುವದು. ಮತ್ತು ಧಾತುವಿನ ಮುಂದಣ ಅಯ್ ಎಂಬುದಕ್ಕೆ ಅಕಾರಾದೇಶವು ಅಥವಾ ಉಕಾರಾದೇಶವು ಬರುವದು. ವಿಧ್ಯರ್ಥವು ಕ್ರಿಯಾಸಮಭಿಹಾರದಲ್ಲಿಯೂ (repetition) ಆಗುವದು. ಮಧ್ಯಮ ಪುರುಷದ ಪ್ರತಿಷೇಧದ ಕ್ರಿಯೆ ವಿಧ್ಯರ್ಥವಾದಲ್ಲಿ ಅಲಿಂ ಎಂದಾಗುವದು. ಮತ್ತು ಬರುವ ಕಾಲದ ಉತ್ತಮ ಪುರುಷದ ಏಕವಚನವು ವಿಧ್ಯರ್ಥದಲ್ಲಿ ಸಲ್ಲುವದು.

ಪ್ರಯೋಗ:

ಗೆ ಕೆ ಕಾರಕ್ಕೆ: ಅವಂ ಬಾಳ್ಗೆ, ಅವರ್ ಬಾಳ್ಗೆ — ಬಾಳುಗೆ, ಬಾಳ್ಕೆ.
ದ್ವಿತ್ವವಿಕಲ್ಪಕ್ಕೆ: ರಕ್ಷಿಕೆ, ರಕ್ಷಿಕ್ಕೆ, ರಾಗಿಸುಕೆ=ರಾಗಿಕೆ, ರಾಗಿಕ್ಕೆ.
ಇಮುಮ್‌ಗಳಿಗೆ: ನೀವು ಇರಿಸಿಂ — ತರಿಸಿಂ — ನಾವು ತಾಗುವಂ, ಬಾಳ್ವಂ.
ಧಾತುಸ್ವರೂಪಕ್ಕೆ: ನೀ ಮಾಡ್, ಬಾಳ್, ಪಾಡೆಲೆತುಂಬಿ!
ಅಕಾರ ಉಕಾರಗಳ ಆದೇಶಕ್ಕೆ: ನೀ ಮಾಡ — ನೀ ಮಾಡು.
ಕ್ರಿಯಾಸಮಭಿಹಾರದ ವಿಧಿಗೆ: ಬೇಡ ಬೇಡೆಂದು ಬಿಡಿಸಿದಂ.
ಅಲಿಗೆ: ಉಸರಲಿಂ — ಸಾರಲಿಂ.
ಉತ್ತಮ ಪುರುಷದ ಏಕವಚನಕ್ಕೆ: ಆಂ ಮಾಡುವೆ — ಮಾಡುವೆಂ

Future tense.

95. ರೇಫೆ ಳಕಾರ ನಕಾರ ಗಕಾರ ಸಕಾರ ಒಕಾರಾಂತ ಧಾತುವಿನ ಪರದ ಭವಿಷ್ಯಂತಿಯ ವಕಾರಕ್ಕೆ ಪಕಾರವಾಗುವದು; ಅದಕ್ಕೆ ವಿಕಲ್ಪದಿಂದ ದ್ವಿತ್ವವಾಗುವದು; ದ್ವಿತ್ವವಾದಲ್ಲಿ, ವಿಕಲ್ಪದಿಂದ ರೇಫೆ ಲೋಪಾಗುವದು. ಗಾಂತ ಸಾಂತ ಧಾತುವಿನ ಕಡೆಗೆ ಎಲ್ಲಿಯೂ ಲೋಪ ಬರುವದು. ನಾಂತ ಣಾಂತಗಳ ಪರದ ವತ್ವಕ್ಕೆ ಬಕಾರವಾಗುವದು.

## ಪ್ರಯೋಗ:

ರೇಫಾಂತಕ್ಕೆ: ಬರ್ವಂ=ಬರ್ಪಂ=ಬರ್ಪ್ಪಂ=ಬಪ್ಪಂ. ತೋರ್ಪ= ತೋರ್ಪ್ಪ. ತರ್ವ=ತರ್ಪ=ತರ್ಪ್ಪ=ತಪ್ಪ.

ಳಕಾರಕ್ಕೆ: ಮಾಡ್ವಂ=ಮಾಳ್ಪಂ–ನೋಳ್ಪಂ–ಅಗಳ್ಪಂ.

ನಕಾರಕ್ಕೆ: ಆನ್ವಂ (ಆನು)=ಆಂಪಂ–ನೋನ್ವಂ (ನೋನು)= ನೋಂಪಂ.

ಗಕಾರಕ್ಕೆ: ಪೋಗ್ವಂ (ಪೋಗು)=ಪೋಪಂ–ತಾಗ್ವಂ (ತಾಗು)= ತಾಪಂ–ತೂಗ್ವ (ತೂಗು) ತೂಪಂ.

ಸಕಾರಕ್ಕೆ: ತರಿಸ್ವಂ (ತರಿಸು)=ತರಿಪಂ–ಇರಿಸ್ವಂ (ಇರಿಸು)=ಇರಿ ಪಂ–ಬೆಸಸ್ವಂ (ಬೆಸಸು) ಬೆಸಪಂ. ಇಲ್ಲಿ ಗಕಾರ ಸಕಾರಗಳಿಗೆ ಲೋಪವಾಯಿತು.

ಓಕಾರಕ್ಕೆ: ಓವಂ (ಓ)=ಓಪಂ. (ಸಂರಕ್ಷಣೆ ಮಾಡುವದು).

ಪಕಾರದ ದ್ವಿತ್ವಕ್ಕೆ: ಉದಯಿಸ್ವಂ=ಉದಯಿಪಂ=ಉದಯಿಪ್ಪಂ.

ನಾಂತ ಣಾಂತಗಳ ಬಕಾರಕ್ಕೆ: ನಾನ್ವಂ (ನಾನ್=ತೊಯು)=ನಾಂ ಬಂ–ಎನ್ವಂ (ಎನು)=ಎಂಬಂ.–ತಿನ್ವಂ (ತಿನು)=ತಿಂಬಂ–ಉ ಣ್ವಂ (ಉಣ್ಣು)=ಉಣ್ಬಂ=ಉಂಬಂ–ಕಾಣ್ವ (ಕಾಣು) ಕಾಣ್ಬಂ (ಕಾಂಬಂ) ಪೂಣ್ವಂ (ಪೂಣು)=ಪೂಣ್ಬಂ.

96. ಪ್ರಯೋಜನ ವಸ್ತುವಿಗೆ ನಿಮಿತ್ತವಾದ ಕ್ರಿಯೆಯಲ್ಲಿಯೂ, ಕ್ರಿಯೆ ತಾನು ಕ್ರಿಯಾರ್ಥವನ್ನು ಹೇಳುವಲ್ಲಿಯೂ, ಅಲ್ ಎಂಬುದು ಕೂ ಡುವದು. ಈ ಅಲ್ ಎಂಬುದರ ಮುಂದೆ ಒಮ್ಮೆ ಕೆಕಾರ ಸಂಧಿಸುವದು. ಮತ್ತು ಅಲ್ಗೆ ವಿಕಲ್ಪದಿಂದ ಲೋಪವು. Infinitive.

## ಪ್ರಯೋಗ:

ಪ್ರಯೋಜನ ವಸ್ತು ಕ್ರಿಯೆಗೆ: ಮಾತರಿಯಲ್ತಕ್ಕ ವಿವೇಕಂ.

ಕ್ರಿಯೆಗೆ: ಗೆಲಲ್ಬಂದಂ–ಈಯಲ್ಬಂದತ್ತು–ಮುತ್ತಲ್ವೇಳ್ದಂ.

ಕೆಕಾರಕ್ಕೆ: ನುಡಿಯಲ್ಕೆ ಬಂದಂ—ಪೇಳಲ್ಕೆಕೇಳ್ದಂ.
ಅಲುವಿನ ಲೋಪಕ್ಕೆ: ಉಡಲ್ವೇಳ್=ಉಡವೇಳ್—ತರವೇಳ್.

Gerunds. 97. ಭೂತಕಾಲ ಕ್ರಿಯೆಯಲ್ಲಿ ಈ, ಓ, ಕಾ, ಕೀ, ಕೇ, ನೋ, ಪೂ, ಬೇ, ಬಾ ಎಂಬೇಕಾಕ್ಷರ ಧಾತುಗಳಿಗೂ ಇಕಾರ ಎಕಾರಾಂತಗಳಿಗೂ ಉಕಾರ ಹತ್ತುವದು. ಉಕಾರಾಂತ ಧಾತುಗಳಿಗೆ ಇಕಾರ ಹತ್ತುವದು. ವ್ಯಂಜನಾಂತಗಳಿಗೆ ಎರಡು ಆಗುವದು. ಉತ್ವ ಹತ್ತಿದಲ್ಲಿ, ಭೂತಕಾಲದ ದಕಾರ ಕೂಡುವದು; ಇತ್ವ ಹತ್ತಿದಲ್ಲಿ, ದತ್ವವು ಬಾರದು. ವರ್ತಮಾನ ಕ್ರಿಯೆಯಲ್ಲಿ ಉತುಂ, ಉತ್ತುಂ, ಉತ್ತೆ, ಉತೆ ಎಂದು ನಾಲ್ಕು ರೂಪವಾಗುವವು.

ಪ್ರಯೋಗ:

ಭೂತಕಾಲಕ್ಕೆ: ಕೀದು (ಕೀವಾಗಿ), ನುಡಿದು, ನೆನೆದು, ಪಾಡಿ, ಬಾಳಿ—ಬಾಳ್ದು—ಬಾಳಿದು.
ವರ್ತಮಾನ ಕಾಲಕ್ಕೆ: ಬಾಳುತುಂ, ಬಾಳುತ್ತುಂ, ಕಾದುತ್ತೆ, ಕಾದುತೆ.

Irregular verbs. 98. ದ ಎಂಬ ಪ್ರತ್ಯಯಕ್ಕೆ ಪರವಾದ ಧಾತುವಿನ ಮೊದಲಿನ ಇಕಾರದಲ್ಲಿಯೂ ಉಕಾರದಲ್ಲಿಯೂ ಹ್ರಸ್ವವಾದ ಎ ಕಾರವು ಒ ಕಾರವು ಬಹಳವಾಗಿ ಬರುವದು.

ಪ್ರಯೋಗ:

ಇತ್ವದ ಎತ್ವಕ್ಕೆ: ಕಿರು (ಕೆರು=ಹೊಳೆ) ಕೆತ್ತಂ, ತಿರು=ತೆತ್ತಂ, ಬಿಸು=ಬೆಕ್ಕಂ, ಇಸು (ಎಸೆ) ಎಚ್ಚಂಗಿರು (ಗೆರು=ನಿಶ್ಚಯ ಮಾಡು) ಗೆತ್ತಂ.
ಉತ್ವದ ಒತ್ವಕ್ಕೆ: ಉಗು=ಒಕ್ಕಂ—ಕುಡು=ಕೊಟ್ಟಂ—ತುಡು=ತೊಟ್ಟಂ—ಪುಗು=ಪೊಕ್ಕಂ.

99. ದ ಎಂಬ ಪ್ರತ್ಯಯದ ಪರವಾದ ಧಾತುವಿನ ಕಡೆಯ ವರ್ಗ ತೃತಿಯಾಕ್ಷರಕ್ಕೆ ವ್ಯಂಜನ ರೂಪದಿಂದ ಮೊದಲಕ್ಕರವಾಗುವದು. ದ

ಕಾರವು ಅದೇ ಪ್ರಥಮಾಕ್ಷರದ ರೂಪವನ್ನು ಪಡೆಯುವದು. ಸುಕಾರಾಂತ ಧಾತುವಿನ ಕಡೆಯ ಸುಕಾರಕ್ಕೆ ವ್ಯಂಜನ ಚಕಾರವಾಗಿ ದಕಾರ ಅದಕ್ಕೆ ಅನುರೂಪವಾಗಿ ಚಕಾರವಾಗುವದು.

ಪ್ರಯೋಗ:

ಗಕಾರಕ್ಕೆ: ನಗು=ನಕ್ಕಂ—ಮಿಗು=ಮಿಕ್ಕಂ—ಬಿಗು (ಸಂತೋಷವಾಗು) ಬಿಕ್ಕಂ

ಡಕಾರಕ್ಕೆ: ನಡು=ನಟ್ಟಂ—ಮಡು=ಮಟ್ಟಂ (ಬಲಿವಾಗು).

ದಕಾರಕ್ಕೆ: ಮುದು=ಮುತ್ತಂ (ಇನ್ನು ಮುತ್ತೈಯ್ಯ ಎಂಬ ಶಬ್ದದಲ್ಲಿ ತೋರುತ್ತದೆ).

ಸುಕಾರದ ಚತ್ವಕ್ಕೆ: ಪಸು=ಪಚ್ಚಂ, ಬೆಸು=ಬೆಚ್ಚಂ, ಇಸು=ಎಚ್ಚಂ.

ಪಕಾರಕ್ಕೆ: ತವು (ತಬು=ಕಡಿಮೆ ಆಗು)=ತಪ್ಪಂ

100. ಕನ್ನಡದ ಧಾತುವಿಗೆ ಹೇತುವಿನಲ್ಲಿಯೂ, ಸ್ವಯಂಕರ್ತೃ ಪರಕರ್ತೃವಿನಲ್ಲಿಯೂ, ಇಸುವಾಗುವದು. ಸಂಸ್ಕೃತದ ಧಾತುಗಳಿಗೆ ಸ್ವಯಂಕರ್ತೃವಿನಲ್ಲಿಯೂ, ಪ್ರಯೋಜನ ವಸ್ತುವಿನಲ್ಲಿಯೂ, ಇಸು ಹುಟ್ಟುವದು. ಇಸು ಎಂಬುದಕ್ಕೆ ಆದೇಶವಾಗಿ ಕನ್ನಡ ಧಾತುಗಳಲ್ಲಿ ಪು, ಹು, ಚು ಎಂದಾಗುವದು. Causal verbs.

ಪ್ರಯೋಗ:

ಹೇತುಗೆ: ಮಾತಿಂ ನಗಿಸಿದಂ—ಸ್ವಯಂಕರ್ತೃವಿಗೆ: ಹುಟ್ಟಿಸಿದಂ (ಹುಟ್ಟಿ=ಅಪರೂಪ)—ಪರಕರ್ತೃವಿಗೆ: ನುಡಿಯಿಸಿದಂ

ಸಂಸ್ಕೃತ ಧಾತುಗೆ: ಖಂಡಿಸಿದಂ. ಪ್ರಯೋಜನವಸ್ತುವಿಗೆ: ಛಿದ್ರಿಸಿದಂ=ಛಿದ್ರ ಮಾಡು.

ಕನ್ನಡಕ್ಕೆ: ಎತ್ತರಿಸಿದಂ (=ಎತ್ತರ ಮಾಡು). ನಿಟ್ಟಿಸಿದಂ.

ಇಸುವಿಗೆ ಬಂದ ಆದೇಶಕ್ಕೆ: ಕಳುಪು—ಕಳುಹು—ತೊಡರ್ಚು (=ಕಟ್ಟು)—ಮಾಣಿಸು=ಮಾಣ್ಚು.

# ಕ್ರಿಯಾ

## a.) ವ್ಯಂಜನಾಂತ ಧಾತುಗಳ ಉದಾಹರಣ.—ಬಾಳ್.

### 1.) ಅವ್ಯಯ ರೂಪಗಳು.

ಭಾವರೂಪ: ಬಾಳ, ಬಾಳಲ್, ಬಾಳಲ್ಕೆ

| | ವರ್ತಮಾನ. | ಭೂತ. | ಭವಿಷ್ಯತ್ತು. | ನಿಷೇಧ. |
|---|---|---|---|---|
| ನ್ಯೂನ: | ಬಾಳುತ್ತೆ–ಬಾಳುತ್ತು | ಬಾಳ್ದು | | ಬಾಳದೆ |
| ಕೃದ್ವಾಚಿ: | | ಬಾಳ್ದ | ಬಾಳ್ವ-ಬಾಳ್ಪ | ಬಾಳದ |
| ಕ್ರಿಯಾನಾಮ: | | ಬಾಳ್ದಂ, ಬಾಳ್ದಳ್-ಬಾಳ್ದುದು | ಬಾಳ್ವಂ, ಬಾಳ್ವಳ್, ಬಾಳ್ವುದು | ಬಾಳದಂ, ಬಾಳದಳ್, ಬಾಳದುದು |

### 2.) ಆಖ್ಯಾತ ರೂಪಗಳು.

| | ಪುರುಷ. | | ವರ್ತಮಾನ. | ಭೂತ. | ಭವಿಷ್ಯತ್ತು. | ನಿಷೇಧ. | ವಿಧಿ. |
|---|---|---|---|---|---|---|---|
| ಏಕವಚನ. | ಉ. | ನಾನು | ಬಾಳ್ದಪೆನ್ | ಬಾಳ್ದೆನ್ | ಬಾಳ್ವೆನ್ | ಬಾಳೆನ್ | ಬಾಳ್ವೆಂ [ಳ್ವುದು |
| | ಮ. | ನೀನು | ಬಾಳ್ದಪಯ್ | ಬಾಳ್ದಯ್ | ಬಾಳ್ವಯ್ | ಬಾಳಯ್ | ಬಾಳ್, ಬಾಳ, ಬಾ |
| | ಪ್ರ. ಪು. | ಅವನು | ಬಾಳ್ದಪಂ | ಬಾಳ್ದಂ | ಬಾಳ್ವಂ | ಬಾಳಂ | ಬಾಳ್ಗೆ, ಬಾಳ್ವುದು |
| | ಸ್ತ್ರೀ. | ಅವಳು | ಬಾಳ್ದಪಳ್ | ಬಾಳ್ದಳ್ | ಬಾಳ್ವಳ್ | ಬಾಳಳ್ | ಬಾಳಲಿಂ |
| | ನಪು. | ಅದು | ಬಾಳ್ದಪುದು | ಬಾಳ್ದುದು | ಬಾಳ್ವುದು | ಬಾಳದು | |
| ಬಹುವಚನ. | ಉ. | ನಾವು | ಬಾಳ್ದಪೆವು | ಬಾಳ್ದೆವು | ಬಾಳ್ವೆವು | ಬಾಳೆವು | ಬಾಳ್ವೆಂ |
| | ಮ. | ನೀವು | ಬಾಳ್ದಪಿರ್ | ಬಾಳ್ದಿರ್ | ಬಾಳ್ವಿರ್ | ಬಾಳಿರ್ | ಬಾಳಿಂ, ಬಾಳ್ವುದು |
| | ಪ್ರ. ಪು. ಸ್ತ್ರೀ. | ಅವರು | ಬಾಳ್ದಪರ್ | ಬಾಳ್ದರ್ | ಬಾಳ್ವರ್ | ಬಾಳರ್ | ಬಾಳ್ಕೆ, ಬಾಳಲಿಂ |
| | ನಪು. | ಅವು | ಬಾಳ್ದಪುವು | ಬಾಳ್ದುವು | ಬಾಳ್ವುವು | ಬಾಳವು | ಬಾಳ್ವುದು |

ಇಸು ಪ್ರತ್ಯಯ ಪೊತ್ತಿರುವ ಕ್ರಿಯಾಪದಗಳು ಉಕಾರಾಂತ ಧಾತುಗಳ ಹಾಗೆ ರೂಪಾಂತರವಾಗುತ್ತವೆ. ಭವಿಷ್ಯತ್ತಿನ ರೂಪಗಳು ಮಾತ್ರ ಎರಡು ಪ್ರಕಾರವಾಗುವವು. ಕಟ್ಟಿಸುವೆನ್ ಅಥವಾ ಕಟ್ಟಿಪೆನ್ (ಕಟ್ಟಿಸ್ವೆನ್)

| ಪುರುಷ. | | ಏಕವಚನ. | ಬಹುವಚನ. |
|---|---|---|---|
| ಉ. | ನಾನು ನಾವು | ಕಟ್ಟಿಪೆನ್ | ಕಟ್ಟಿಪೆವು |
| ಮ. | ನೀನು ನೀವು | ಕಟ್ಟಿಪಯ್ | ಕಟ್ಟಿಪಿರ್ |
| ಪ್ರ. ಪು. | ಅವನು ಅವರು | ಕಟ್ಟಿಪಂ | ಕಟ್ಟಿಪರ್ |
| ಸ್ತ್ರೀ. | ಆಕೆ | ಕಟ್ಟಿಪಳ್ | |
| ನ. | ಅದು ಅವು | ಕಟ್ಟಿಪುದು | ಕಟ್ಟಿಪುವು |

ಮಾಲೆ.

## b.) ಉಕಾರಾಂತ ಧಾತುಗಳ ಉದಾಹರಣ.—ಕಟ್ಟು.

### 1.) ಅವ್ಯಯ ರೂಪಗಳು.

ಭಾವರೂಪ: ಕಟ್ಟ, ಕಟ್ಟಲ್, ಕಟ್ಟಲ್ಕೆ.

| ವರ್ತಮಾನ. | ಭೂತ. | ಭವಿಷ್ಯತ್ತು. | ನಿಷೇಧ. |
|---|---|---|---|
| ಕಟ್ಟುತ್ತು—ಕಟ್ಟುತೆ | ಕಟ್ಟಿದು, ಕಟ್ಟಿ | | ಕಟ್ಟದೆ |
| | ಕಟ್ಟಿದ | ಕಟ್ಟುವ | ಕಟ್ಟದ |
| | ಕಟ್ಟಿದಂ, ಕಟ್ಟಿದಳ್, ಕಟ್ಟಿದುದು | ಕಟ್ಟುವಂ, ಕಟ್ಟುವಳ್, ಕಟ್ಟುವುದು | ಕಟ್ಟದಂ, ಕಟ್ಟದಳ್, ಕಟ್ಟದದು |

### 2.) ಆಖ್ಯಾತ ರೂಪಗಳು.

| ವರ್ತಮಾನ. | ಭೂತ. | ಭವಿಷ್ಯತ್ತು. | ನಿಷೇಧ. | ವಿಧಿ. |
|---|---|---|---|---|
| ಕಟ್ಟಿದಪೆನ್ | ಕಟ್ಟಿದೆನ್ | ಕಟ್ಟುವೆನ್ | ಕಟ್ಟೆನ್ | ಕಟ್ಟುವೆಂ |
| ಕಟ್ಟಿದಪೆಯ್ | ಕಟ್ಟಿದೆಯ್ | ಕಟ್ಟುವೆಯ್ | ಕಟ್ಟೆಯ್ | ಕಟ್ಟು, ಕಟ್ಟ, ಕಟ್ಟುವದು |
| ಕಟ್ಟಿದಪಂ | ಕಟ್ಟಿದಂ | ಕಟ್ಟುವಂ | ಕಟ್ಟಂ | ಕಟ್ಟುಗೆ, ಕಟ್ಟುವುದು |
| ಕಟ್ಟಿದಪಳ್ | ಕಟ್ಟಿದಳ್ | ಕಟ್ಟುವಳ್ | ಕಟ್ಟಳ್ | ಕಟ್ಟಲಿಂ |
| ಕಟ್ಟಿದಪುದು | ಕಟ್ಟಿದುದು | ಕಟ್ಟುವುದು | ಕಟ್ಟದು | |
| ಕಟ್ಟಿದಪೆವು | ಕಟ್ಟಿದೆವು | ಕಟ್ಟುವೆವು | ಕಟ್ಟೆವು | ಕಟ್ಟುವಂ |
| ಕಟ್ಟಿದಪಿರ್ | ಕಟ್ಟಿದಿರ್ | ಕಟ್ಟುವಿರ್ | ಕಟ್ಟಿರ್ | ಕಟ್ಟಿಂ, ಕಟ್ಟುವುದು |
| ಕಟ್ಟಿದಪರ್ | ಕಟ್ಟಿದರ್ | ಕಟ್ಟುವರ್ | ಕಟ್ಟರ್ | ಕಟ್ಟುಗೆ, ಕಟ್ಟಲಿಂ |
| ಕಟ್ಟಿದಪುವು | ಕಟ್ಟಿದುವು | ಕಟ್ಟುವುವು | ಕಟ್ಟವು | ಕಟ್ಟುವುದು |

ಇರು ಎಂಬರ್ಥದ ಉಳ್ ಧಾತು.

| ಪುರುಷ. | | ಏಕವಚನ. | ಬಹುವಚನ. |
|---|---|---|---|
| ಉ. | ನಾನು ನಾವು | ಒಳೆನ್ | ಒಳೆವು |
| ಮ. | ನೀನು ನೀವು | ಒಳೆಯ್ | ಒಳಿರ್ | 
| ಪ್ರ. ಪು. | ಅವನು ಅವರು | ಒಳಂ | ಒಳರ್ |
| ಸ್ತ್ರೀ. | ಆಕೆ | ಒಳಳ್ | |
| ನ. | ಅದು ಅವು | ಉಂಟು (ಉಳ್ಳುದು) | ಒಳವು (ಉಳ್ಳುವು) |

ಕೃದ್ವಾಚಿ.—ಉಳ್ಳ—ಉಂಟು ಎಂಬ ರೂಪ ಮೂರು ಲಿಂಗಗಳಲ್ಲಿ ವ್ಯವಹರಿಸುವದು.

ಆ ಇ ಎ ಕಾರಾಂತ

1.) ಅವ್ಯಯ

ಭಾವರೂಪ: ಇೞಿಯ, ಇೞಿಯಲ್, ಇೞಿಯಲ್ಕೆ. ಮೇಯ,

| | ವರ್ತಮಾನ. | ಭೂತ. |
|---|---|---|
| ನ್ಯೂನ: | ಇೞಿಯುತ್ತೆ, ಇೞಿಯುತೆ, ಇೞಿಯುತ್ತು | ಇೞಿದು, ಮೇದು, ಮಾದು |
| ಕೃದ್ವಾಚಿ: | | ಇೞಿದ, ಮಾದ, ಮೇದ |
| ಕ್ರಿಯಾನಾಮ: | | ಇೞಿದಂ, ಇೞಿದಳ್, ಇೞಿದುದು |

2.) ಆಖ್ಯಾತ

| ಪುರುಷ. | | | ವರ್ತಮಾನ. | ಭೂತ. |
|---|---|---|---|---|
| ಏಕವಚನ. | ಉ. | ನಾನು | ಇೞಿದಪೆನ್, ಮೇದಪೆನ್ | ಇೞಿದೆನ್, ಮೇದೆನ್ |
| | ಮ. | ನೀನು | ಇಳಿದಪಯ್ | ಇೞಿದಯ್ |
| | ಪ್ರ. ಪು. | ಅವನು | ಇೞಿದಪಂ | ಇೞಿದಂ |
| | ಸ್ತ್ರೀ. | ಅವಳು | ಇೞಿದಪಳ್ | ಇೞಿದಳ್ |
| | ನಪು. | ಅದು | ಇೞಿದಪುದು | ಇೞಿದುದು |
| ಬಹುವಚನ. | ಉ. | ನಾವು | ಇೞಿದಪೆವು | ಇೞಿದೆವು |
| | ಮ. | ನೀವು | ಇೞಿದಪಿರ್ | ಇೞಿದಿರ್ |
| | ಪ್ರ. ಪು. ಸ್ತ್ರೀ. | ಅವರು | ಇೞಿದಪರ್ | ಇೞಿದರ್ |
| | ನಪು. | ಅವು | ಇೞಿದಪುವು | ಇೞಿದುವು |

ಧಾತುಗಳು.—ಇಳಿ

| ರೂಪಗಳು. | |
| --- | --- |
| ಮೇಯಲ್, ಮೇಯಲ್ಕೆ. | ಮಾಯ, ಮಾಯಲ್, ಮಾಯಲ್ಕೆ |
| ಭವಿಷ್ಯತ್ತು. | ನಿಷೇಧ. |
| | ಇಳಿಯದೆ |
| ಇಳಿವ, ಮೇವ, ಮಾವ | ಇಳಿಯದ |
| ಇಳಿವಂ, ಇಳಿವಳ್; ಇಳಿವುದು | ಇಳಿಯದಂ, ಇಳಿಯದಳ್, ಇಳಿಯದದು |

ರೂಪಗಳು.

| ಭವಿಷ್ಯತ್ತು. | ನಿಷೇಧ. | ವಿಧಿ. | |
| --- | --- | --- | --- |
| ಇಳಿವೆನ್ | ಇಳಿಯೆನ್ | ಇಳಿವೆಂ | ಇತ್ಯಾದಿ. |
| ಇಳಿವಯ್ | ಇಳಿಯುಯ್ | ಇಳಿ, ಇಳಿವುದು | |
| ಇಳಿವಂ | ಇಳಿಯಂ | ಇಳಿಗೆ, ಇಳಿವುದು | |
| ಇಳಿವಳ್ | ಇಳಿಯಳ್ | | |
| ಇಳಿವುದು | ಇಳಿಯದು | | |
| ಇಳಿವೆವು | ಇಳಿಯೆವು | ಇಳಿವಂ | |
| ಇಳಿವಿರ್ | ಇಳಿಯಿರ್ | ಇಳಿಯಿಂ, ಇಳಿವುದು | |
| ಇಳಿವರ್ | ಇಳಿಯರ್ | ಇಳಿಗೆ, ಇಳಿವುದು | |
| ಇಳಿವುವು | ಇಳಿಯುವು | ಮಾವುದು | |

101. ಆಗು ಎಂಬ ಧಾತುವಿನ ಭವಿಷ್ಯತ್ತಿನ ರೂಪ ಆರ್ಪ ಎಂದಾಗುವದು.

ಪ್ರಯೋಗ:

ಮಾಡಲಾರ್ಪೆನು, ಮಾಡಲಾರ್ಪಡೆ, ಇದಂ ಮಾಡಲಾರ್ಪನರಂ. ಒಪ್ಪಲಾರ್ಕುಮೆ (ಒಪ್ಪಲಾದೀತೆ).

**Passive.** 102. ಪಡು (ಅಥವಾ ಪಡೆ) ಧಾತು ಪರವಾದರೆ, ಧಾತುಗೆ ಹ್ರಸ್ವದ ಎಕಾರವು ಅಥವಾ ಅ, ಅಲ್ ಎಂಬೀ ಅಕ್ಷರಾಂತವಾದ ಭಾವರೂಪಗಳು ಹತ್ತಿ, ಕರ್ಮಣಿ ಪ್ರಯೋಗವಾಗುವದು. ಪಡು ಎಂಬುದು ಉಕಾರಾಂತ ಧಾತುಗಳಂತೆ ರೂಪಾಂತರವಾಗುತ್ತದೆ. ಈ ಕರ್ಮಣಿ ಪ್ರಯೋಗ ಸಕರ್ಮಕ ಧಾತುಗಳಲ್ಲಿಯೂ, ಅಕರ್ಮಕ ಧಾತುಗಳಲ್ಲಿಯೂ ವ್ಯವಹರಿಸುವದು.

ಪ್ರಯೋಗ:

ಪಡು ಧಾತುಗೆ: ಮಾಡಲ್ಪಟ್ಟಂ—ಮಾಡೆಪಟ್ಟಂ—ಮಾಡಲ್ಪಟ್ಟಪಂ—ಮಾಡಲ್ಪಡುವಂ

ಪಡೆ ಧಾತುಗೆ: ಪ್ರಯೋಗಿಸೆ ಪಡೆಗುಂ—ಮಾಡಲ್ಪಡೆದಂ—ಪ್ರಯೋಗಿಸ ಪಡೆಗುಂ

ಅಕರ್ಮಕ ಧಾತುಗೆ: ಇರೆಪಟ್ಟಂ—ಇರಲ್ಪಟ್ಟಪಂ—ಇರಲ್ಪಡುವಂ

ಸಕರ್ಮಕ ಧಾತುಗೆ: ಮಾಡಲ್ಪಟ್ಟುದು ಘಟಂ ಕುಂಬರನಿಂ—ಪಾರ್ವನಿಂ ಅರಸಂ ಗ್ರಾಮುಮಂ ಬೇಡಲ್ಪಟ್ಟಂ

## VII. (CORRUPTED SANSCRIT WORDS)

## ಅಪಭ್ರಂಶ ಪ್ರಕರಣ. (ತದ್ಭವ)

**Compounds with ತದ್ಭವ and ತತ್ಸಮ.** 103. ಎರಡು ಪದಗಳು ಅಪಭ್ರಂಶವಾದರೆ, ಸಮಾಸ ಮಾಡುವದು. ಎರಡು ಪದಗಳಲ್ಲಿ ಒಂದು ಪದ ಅಪಭ್ರಂಶಕ್ಕೆ ಬಾರದೆ ನಿಜರೂಪದಿಂದ ನಿಂತರೂ, ನಿರ್ದೋಷವಾಗಿ ಕೆಲವು ಸ್ಥಾನಗಳಲ್ಲಿ ಸಮಾಸ ಉಂಟು.

ಪ್ರಯೋಗ:

ಎರಡು ಪದಗಳ ಅಪಭ್ರಂಶಕ್ಕೆ: ದೃಷ್ಟಿವಿಷ=ದಿಟ್ಟಿ ಬಿಸಂ
ತತ್ಸಮ ತದ್ಭವಸಮಾಸಕ್ಕೆ: ಉತ್ತರದೇಶಂ=ಉತ್ತರದೇಸಂ
ತದ್ಭವ ತತ್ಸಮಸಮಾಸಕ್ಕೆ: ದಿಶಾಬಲಿ=ದೆಸೆಬಲಿ

104. ಸಮಾಸದ ಆದಿಯೊಳಗೆ ಇದ್ದ ಏಕ, ದ್ವಿ, ತ್ರಿ, ಚತುಃ ಶಬ್ದಗಳಿಗೆ ಎಕ್ಕ, ದು, ತಿ, ಚೌ ಎಂಬಿವು ಆದೇಶವಾಗಿ ಬರುವವು. ಇವು ಪ್ರತ್ಯಯಾಂತವಾದಾಗ್ಯೂ ಈ ಲಕ್ಷಣ ಸಲ್ಲುವದು. Changes with ಏಕ etc,

ಪ್ರಯೋಗ:

ಎಕ್ಕಕ್ಕೆ: ಏಕ ಸ್ಥಲಂ=ಎಕ್ಕತಲಂ
ದುಗೆ: ದ್ವಿಹಸ್ತಂ=ದುಹತ್ತಂ–ದ್ವಿಶರಂ=ದುಸರಂ
ತಿಗೆ: ತ್ರಿಗುಣ=ತಿಗುಣ–ತ್ರಿಶೂಲಂ=ತಿಸುಳಂ
ಚತುಃ ಎಂಬುದಕ್ಕೆ: ಚತುರ್ಗ್ರಾಮಂ=ಚೌಗಾವಂ
ಪ್ರತ್ಯಯಾಂತಕ್ಕೆ: ದ್ವಿಕಂ=ದುಗಂ–ತ್ರಿಕಂ=ತಿಗಂ–ಚತುಷ್ಕಂ=ಚೌಕಂ

105. ವ್ಯಂಜನ ಪರವಾದರೆ, ಸಹ ಮಹಚ್ಛಬ್ದಗಳಿಗೆ ಸಾಮಾ ಎಂಬ ಆದೇಶ ಬಹಳವಾಗಿ ಬರುವದು. and ಸಹ, ಮಹ.

ಪ್ರಯೋಗ:

ಸಹವಾಸಿ=ಸಾವಾಸಿ–ಸಾದೇವಂ; ಮಹಾ ಜನಂ=ಮಾಜನಂ, ಮಾಕಾಲಂ.

106. ಪರಪದದ ಮೊದಲಲ್ಲಿ ಪಕಾರ ಬಕಾರ ಮಕಾರಗಳು ಇದ್ದರೆ, ವಕಾರವಾಗುವದು; ಆ ಪಕಾರದ ಊತ್ವಕ್ಕೆ ಹ್ರಸ್ವವಾದ ಉಕಾರ ಬರುವದು. ಅಂತರ್ ಶಬ್ದದ ಕಡೆಯ ರೇಫೆಗೆ ಲೋಪವಾಗುವದು. ಪ, ಬ, ಮ changed into ವ.

ಪ್ರಯೋಗ:

ಪಕಾರಕ್ಕೆ ವಕಾರಂ: ಪಾದಪಾಶಂ=ಪಾದವಾಸಂ. ಸಂಸ್ಥಾಪತ್ತನಂ= ಸಂತೆವಟ್ಟಣಂ

ಬಕಾರಕ್ಕೆ ವಕಾರಂ: ಶರಬಂಧಂ=ಸರವಂದಂ– ಶೃಂಖಲಾಬಂಧಂ= ಸಂಕಲೆವಂದಂ (ಬೇಡಿಯ ಬಂಧನ)

ಮಕಾರಕ್ಕೆ ವತ್ವಂ: ದೇವಮಾನುಷಂ=ದೇವವಾನಸಂ. ರತ್ನಮಣಿ= ರನ್ನವಣಿ.

ಊತ್ವಕ್ಕುತ್ವಂ: ಕರ್ಣಪೂರಂ=ಕನ್ನವುರಂ

ರೇಫೆ ಲೋಪಕ್ಕೆ: ಅಂತಃಪುರಂ=ಅಂತವುರಂ. ಆದರೆ ಕೆಲವರೊಳ್ಗೆ ಈ ಪ್ರಯೋಗವಿಲ್ಲ.

Compounds with ಆಕಾರ etc.

107. ಆಕಾರ ಆಗಾರ ಆವಳಿಕಾ ಶಬ್ದಗಳು ಪರವಾದರೆ, ತಮ್ಮ ಎರಡನೆ ಅಕ್ಕರದಲ್ಲಿಯೂ ಆದಿಯ ಅಕ್ಕರದಲ್ಲಿಯೂ ಲೋಪ ಬರುವದು.

ಪ್ರಯೋಗ:

ಆಕಾರಕ್ಕೆ: ಕೂಪಕಾಕಾರ=ಕೂಪಾರ (ಸಮುದ್ರ)

ಆಗಾರಕ್ಕೆ: ಭಂಡಾಗಾರ=ಭಂಡಾರ– ದೇವಾಗಾರ=ದೇವಾರ (ದೇವರ ಮನೆ)

ಆವಳಿಕೆಗೆ: ದೀಪಾವಳಿಕೆ=ದೀಪಾಳಿಗೆ=ದೀವಳಿಗೆ

ಸಿಂಹಾಗಾರ ಕಾರಾಗಾರ ಎಂಬ ಶಬ್ದಗಳಿಗೆ ಈ ಲಕ್ಷಣವಿಲ್ಲ.

Compounds of ದ್ವಾರ with ಶ್ರೀ etc.

108. ಶ್ರೀ ವಕ್ರ (ಸೊಟ್ಟ), ಪಾನೀಯ (ನೀರು), ಕಂಟಕ (ಮುಳ್ಳು) ಎಂಬಿವಕ್ಕೆ ಆದ ಸಿಯ, ವಂಕ, ಪಾಣಿಯ, ಕಂಟಿ ಎಂಬ ಶಬ್ದಗಳು ಮೊದಲಲ್ಲಿ ಇದ್ದರೆ, ಮುಂದಣ ದ್ವಾರ ಎಂಬ ಶಬ್ದಕ್ಕೆ ದರವೆಂದು, ದಾರವೆಂದು, ಬಾರವೆಂದು ವಿಕಲ್ಪವಾಗಿ ಬರುವದು.

ಪ್ರಯೋಗ:

ಶ್ರೀ ದ್ವಾರಂ=ಸಿಯದರಂ– ಸಿಯದಾರಂ– ಸಿಯಬಾರಂ. ವಕ್ರದ್ವಾರಂ=ವಂಕದರಂ– ವಂಕದಾರಂ– ವಂಕಬಾರಂ. ಪಾನಿಯದ್ವಾರಂ=ಪಾಣಿಯ ಬಾರಂ. ಕಂಟಕದ್ವಾರಂ=ಕಂಟಿಯ ಬಾರಂ.

109. ಮಣಿ, ಮಂಚ, ಪಟ್ಟ, ತೋರಣ, ಅಟ್ಟ, ಗೋಣಿ, ಸಬಳಂ (=ಈಟಿ), ಅಂಕ (=ಗುರುತು), ಲತೆ, ಕಂಕಣ, ಕೊಂಟಿ (=ಸುಮಾರು), ಬಲ, ಅಂಗಣ, ಬಿಲ, (=ತೂತು), ಬಂದಿ, ಮಾಲೆ, ಗಾಳ, ಗಂಡ, ಗಲ್ಲ, ಮಲ್ಲ, ತಳ ಎಂಬೀ ಶಬ್ದಗಳು ಸಂಸ್ಕೃತಕ್ಕೂ ಕನ್ನಡಕ್ಕೂ ಸರಿ; ಇವನ್ನ ಸಂಸ್ಕೃತ ಶಬ್ದಗಳ ಸಂಗಡಲೂ ಕನ್ನಡ ಶಬ್ದಗಳ ಸಂಗಡಲೂ ಸಮಾಸಿಸಲಾಗುವದು.

Compound words formed by Sanscrit and Canarese words.

ಪ್ರಯೋಗ:

ಕಂಠಮಾಲೆ, ಪೂಮಾಲೆ, ಭುಜಬಲಂ, ಆಳ್ವಲಂ, ತೋಳ್ವಲಂ

110. ಸಂಸ್ಕೃತವನ್ನು ಮರೆಗೊಳ್ಳದೆ ಅಪಭ್ರಂಶಕ್ಕೂ ದೇಶಿಯ ಪದಕ್ಕೂ ಸಮಾಸ ಉಂಟು.

ಪ್ರಯೋಗ:

ಅಪಭ್ರಂಶಕ್ಕೂ ದೇಶಿಯ ಪದಕ್ಕೂ: ಸಿಜ್ಜೆವನೆ, ಸಿಂಗವೆಂಟೆ (ಬೇಟೆ);
ಅಪಭ್ರಂಶಸಮಾಸಕ್ಕೂ ದೇಶಿಯ ಪದಕ್ಕೂ: ತಾಣದೀವಿಗೆ ಬೆಳಗು
ತತ್ಸಮ ಸಮಾಸಕ್ಕೂ ದೇಶಿಯ ಪದಕ್ಕೂ: ಪುಷ್ಪಮಾಲೆದುರುಂಬು

## VIII. (ADVERBS) ಅವ್ಯಯ ಪ್ರಕರಣ.

111. ಅವ್ಯಯ ಅಂದರೆ—ರೂಪಾಂತರವಾಗದಂಥಾ ಪದ; ಅದಕ್ಕೆ ವಿಭಕ್ತಿ ಮುಂತಾದದ್ದು ಏನೇನೂ ಹತ್ತುವದಿಲ್ಲ; ಆದರೂ ಕೆಲವು ಅವ್ಯಯ ಪದಗಳಿಗೆ ವಿಕಲ್ಪದಿಂದ ವಿಭಕ್ತಿಗಳು ಹತ್ತುವವು. ಅವ್ಯಯ ಪದಗಳು ಯಾವವೆಂದರೆ: ಭೋಂಕನೆ ಮುಂತಾದ ಅನುಕರಣಗಳೂ, ಅದು, ಅನೆ, ಅಗೆ, ಎಂಬೀ ಪ್ರತ್ಯಯಾಂತವಾದ ಕ್ರಿಯಾವಿಶೇಷಣಗಳೂ, ಸಂಗಡಾದಿಗಳೂ, ಅಹಹ, ಅಕಟ, ಯೊ, ಎ ಮುಂತಾದ ನಿಪಾತಗಳೂ.

Adverbs, conjunctions, interjections.

ಪ್ರಯೋಗ:

ಅನುಕರಣಕ್ಕೆ: ಗಡಗಡ ನಡೆದಂ
ಕ್ರಿಯಾವಿಶೇಷಣಕ್ಕೆ: ಅದುಗೆ: ಹಿರಿದು ಕೊಂಡಾಡಿದಂ;
ಅನೆ ಅಗೆಗಳಿಗೆ: ಮೆಲ್ಲನೆ ಬಂದಂ–ಸುಮ್ಮಗೆ ಇದ್ದರ್
ಸಂಗಡಾದಿಗೆ: ಅವರೊಡನೆ ಪೋದಂ, ಇವನ ಸಂಗಡ ಕಲಿತಂ
ನಿಪಾತಕ್ಕೆ: ಅಕಟ ಊರು ಸುಟ್ಟು ಪೋದುದು. ಮಾಡಿದನೋ–ಬಂದಪ್ಪನೆ.
ಅವ್ಯಯ ಪದಕ್ಕೆ ವಿಭಕ್ತಿ ಹತ್ತಿದ್ದಕ್ಕೆ. ಇವರ ಸಂಗಡದಿಂ ಬಂದಂ. ಈ ವರಿಂಗೆ ರಕ್ಷಿಸಿದಂ.

A particular kind of adverbs.

112. ಅಕಾರಾಂತವಾದ ಸಂಸ್ಕೃತ ಗುಣವಾಚಿಗಳು ಏಕ ವಚನದ ದ್ವಿತಿಯಾ ವಿಭಕ್ತಿಪ್ರತ್ಯಯವ ಹೊಂದಿ ಅವ್ಯಯಗಳಂತೆ ವರ್ತಿಸುವವು. ಕೆಲವು ಅಕಾರಾಂತ ಸಂಸ್ಕೃತ ನಾಮಗಳಲ್ಲಿ ಸಹ ಈ ಪ್ರಯೋಗ ವ್ಯವಹರಿಸುವದು.

ಪ್ರಯೋಗ:

ಸಂಸ್ಕೃತ ಗುಣವಾಚಿಗೆ: ನಿತ್ಯ=ನಿತ್ಯಂ; ನಿತ್ಯಂ ಬರುವಂ; ಶೀಘ್ರ=ಶೀಘ್ರಂ; ಶೀಘ್ರಂ ಪೋದಂ
ಬೇರೆ ನಾಮಗಳಿಗೆ: ಸುಖ=ಸುಖಂ; ಸುಖಮಿರ್ದ್ದಂ=ಸುಖವಾಗಿದ್ದನು.

The suffix ಆನುಂ etc.

113. ಸ್ಥಾನದಿಶಾಕಾಲ ಸಂಖ್ಯೆಗಳಲ್ಲಿ ಆನುಂ ಎಂಬ ಅವ್ಯಯವನ್ನು ಹೇಳಲಾಗುವದು; ಏನುಂ ಎಂಬರ್ಥದಲ್ಲಿ ಅಣ, ಆಣ ಎಂಬ ಅವ್ಯಯವನ್ನು ಹೇಳುವರು.

ಪ್ರಯೋಗ:

ಸ್ಥಾನಕ್ಕೆ: ಎಲ್ಲಿಯಾನುಂ–ದೆಶೆಗೆ: ಎತ್ತಾನುಂ
ಕಾಲಕ್ಕೆ: ಎಂದಾನುಂ–ಸಂಖ್ಯೆಗೆ: ಒಂದಾನುಂ–ಒಬ್ಬಾನುಂ

ಅಣಂ, ಆಣಂಗಳಿಗೆ: ಕಾರ್ಯಮಣಮಿಲ್ಲ=ಏನು ಕಾರ್ಯವಿಲ್ಲ; ಗುಣಮಾಣ ಮಿಲ್ಲ=ಏನು ಗುಣಮಿಲ್ಲ ಎಂಬರ್ಥಂ. ಈಗ ರೂಢಿ ತಪ್ಪಿದ ಅವ್ಯಯ ಪದಗಳನ್ನು ಕೆಳಗೆ ಬರೆದಿರುವ ವೃತ್ತಕಂದಗಳಲ್ಲಿ ನೋಡಬೇಕು:

### ಮತ್ತೇಭವಿಕ್ರೀಡಿತ ವೃತ್ತ.

ಅಧಿಕಾರ್ಥಕ್ಕೆಡೆಯಾದ ಶಬ್ದ ಎಡೆ ನೀಡುಂ ಸಾಡೆ ಮೇಣಾವಗಂ
ಬುದು ಮತ್ತಂ ನೆರೆ ನೂಳ್ದುದ್ಯೆಯದೆ ಕರಂ ಯಾದಂ ಮಿಗೆ ಕೆಂನವೆಂ
ದೊದಗಿರ್ಕೇಗವಲಂ ವರಂ ನಿಜದಭಿಪ್ರಾಯಕ್ಕೆದಲ್ಲೆಂದೆನಿ
ಪ್ಪುದು ಸೋಡುಂ ಪಿರಿದಾರ್ಥದಲ್ಲಿರದೆ ಬಾಡೆಂದಾದುದಾಪೂರ್ವರಿಂ.

### ಕಂದ.

ಸಲೆ ಯೆಂದಾನಿತ್ಯಾರ್ಥದಿ
ಸಲುವುದು–ಮತ್ತಿಂದು ಪ್ರಶ್ನಾನುಮಾನದಿ,
ಗಳೆಗಡ ವೃಚಿತವಾರ್ತ ನುಡಿ
ಗಳಲಿಕಾರಣದೊಳೆಲ್ಲಾವರ್ ಮನಿಪೇನುಡಿಗಳ್.

### ವಸಂತತಿಲಕ ವೃತ್ತ.

ಸುತ್ತೆಂಬ ವಾಕ್ಯ ಭ್ರಮದಾರ್ಥದೊಳಾಗಿ ಸಲ್ಗಂ;
ಮತ್ತೆಂಬ ಭಾವದೊಳೆಗಂ ಬಳಿಯಾ ಬಳ್ಲೆಯೆಂದುಂ
ಪತ್ತಿರ್ಕು; ಕಾಲದಬಿಭಾವದೊಳಾಗಡೆಂದುಂ
ಮತ್ತೀಗಡೆಂದು ನುಡಿಗುಂ ವರಲಾಕ್ಷಣೀಕರ್.

### ಕಂದ.

ಊದಯಾರ್ಥದೊಳ್ಗುಂ ತಾ ಸವ
ಳದೆ ಸವಳ್ತಡೆ ಪೊಳ್ತಡೆ ಯೆಂಬೀ ವಾಕ್ಯಂಗ
ಳೊದಗೀವರಿ ಮೊನೆಯುಡೆಂದು
ಗದಿಪರ್ ಮೊಬಾರೆ ಪೋದಬಾರೆಂಬುದಕಂ.



# IX. (SYNTAX) ಪ್ರಯೋಗ ಪ್ರಕರಣ.

Peculiar use of the cases.

114. ಸಪ್ತವಿಭಕ್ತಿಗಳು ಯಥೇಷ್ಟ ಪಲ್ಲಟವಾಗುವವು.—ಪ್ರಥಮಾರ್ಥದಲ್ಲಿಯೂ ದ್ವಿತಿಯಾರ್ಥದಲ್ಲಿಯೂ ಷಷ್ಟಿ ಬರುವದು.—ಪ್ರಥಮಾರ್ಥದಲ್ಲಿಯೂ ತೃತಿಯಾರ್ಥದಲ್ಲಿಯೂ ಚತುರ್ಥ್ಯರ್ಥದಲ್ಲಿಯೂ ಸಮುಚ್ಚಯದಿಂದ ಪಂಚಮ್ಯರ್ಥದಲ್ಲಿಯೂ ದ್ವಿತಿಯೆ ಆಗುವದು.—ತ್ರಿತಿಯಾರ್ಥದಲ್ಲಿ ಸಪ್ತಮಿ ಆಗುವದು.—ಷಷ್ಟಿಯು ದ್ವಿತಿಯೆಯು ಚತುರ್ಥ್ಯರ್ಥದಲ್ಲಿ ಬರುವವು.—ಸಪ್ತಮಿ ಪ್ರಥಮಾರ್ಥದಲ್ಲಿಯೂ ಷಷ್ಟಿಯಾರ್ಥದಲ್ಲಿಯೂ ಚತುರ್ಥ್ಯರ್ಥದಲ್ಲಿಯೂ ವರ್ತಿಸುವದು.—ಪ್ರಥಮಾರ್ಥದಲ್ಲಿ ದ್ವಿತಿಯೆ ಆಗುವದು.

ಪ್ರಯೋಗ:

ಪ್ರಥಮಾರ್ಥದ ಷಷ್ಟಿಗೆ: ನಿಶ್ಶಂಕೆಯಿಂ ನೃಪನ ಪೇೞ್ಗೆ=ನೃಪಂ ಪೇೞ್ಗೆ ಎಂದರ್ಥವು; ಗಿಡದ ಸೋಂಕೆ=ಗಿಡಂ ಸೋಂಕೆ.

ದ್ವಿತಿಯಾರ್ಥದ ಷಷ್ಟಿಗೆ: ನೀನ್ ಎನ್ನ ಕೊಂದೆ=ಎನ್ನಂಕೊಂದೆ.—ನಾಡ ಮರೆತಂ=ನಾಡಂ ಮರೆತಂ; ಈಗಿನವರಲ್ಲಿ ಈ ಷಷ್ಟಿಯ ರೂಪವು ದ್ವಿತಿಯಾರ್ಥದಲ್ಲಿ ಬಹಳ ವರ್ತಿಸುತ್ತದೆ.

ಪ್ರಥಮಾರ್ಥದ ದ್ವಿತಿಯೆಗೆ: ಗುಣವನುಳ್ಳಂ=ಗುಣವುಳ್ಳಂ.—ಬುದ್ಧಿಯನಿಲ್ಲದವನು=ಬುದ್ಧಿ ಇಲ್ಲದವನು.

ತೃತಿಯಾರ್ಥದ ದ್ವಿತಿಯೆಗೆ: ತಂದೆಯಂ ಪೂವಂ ಅರ್ಚಿಸಿದಂ=ತಂದೆಯಂ ಪೂವಿಂದ ಅರ್ಚಿಸಿದಂ

ಚತುರ್ಥ್ಯರ್ಥದ ದ್ವಿತಿಯೆಗೆ: ಪೊನ್ನಂ ಬಡ್ಡಿಯಂ ಕೊಟ್ಟಂ=ಪೊನ್ನಂ ಬಡ್ಡಿಗೆ ಕೊಟ್ಟಂ

ಪಂಚಮ್ಯರ್ಥದ ದ್ವಿತಿಯೆಗೆ: ಬೋಧಕನಂ ಕಾರ್ಯಮಂ ಬೆಸಗೊಂಡಂ=ಬೋಧಕನ ದೆಶೆಯಿಂದ ಮುಂ.

ತೃತಿಯಾರ್ಥದ ಸಪ್ತಮಿಗೆ: ಕೊಡಲಿಯೊಳ್ ಕಡಿದಂ=ಕೊಡಲಿಯಿಂ ಮುಂ. (ಸಪ್ತಮಿ ಕರಣಾರ್ಥದಲ್ಲಿ ಬರುತ್ತದೆ.)

ಚತುರ್ಥ್ಯರ್ಥವಾದ ಷಷ್ಠಿಗೆ: ನಾಡಿಗೆ ಒಡೆಯಂ=ನಾಡೊಡೆಯಂ.— ಕೊಡೆಗೆ ಒಡೆಯಂ=ಕೊಡೆಯೊಡೆಯಂ

ಚತುರ್ಥ್ಯರ್ಥವಾದ ದ್ವಿತಿಯೆಗೆ: ಶಿಷ್ಯಂಗೆ ಕಲ್ಪಿಸಿದಂ=ಶಿಷ್ಯನಂ ಕಲ್ಪಿಸಿದಂ

ಪ್ರಥಮಾರ್ಥದ ಸಪ್ತಮಿಗೆ: ಒಂದು ದಿವಸಂ ಬಂದಂ=ಒಂದು ದಿವಸದೊಳ್ ಬಂದಂ

ಷಷ್ಠಿಯಾರ್ಥದ ಸಪ್ತಮಿಗೆ: ಚಾಗಿಗಳ ಬಲ್ಲಿಹಂ=ಚಾಗಿಗಳೊಳ್ ಬಲ್ಲಹಂ

ಚತುರ್ಥ್ಯರ್ಥದ ಸಪ್ತಮಿಗೆ: ತಾವರೆಗೆ ಪುಟ್ಟಿದಂ=ತಾವರೆಯೊಳ್ ಪುಟ್ಟಿದಂ

ಪ್ರಥಮಾರ್ಥದ ದ್ವಿತಿಯೆಗೆ: ಒಂದು ವರುಷಮಿರ್ದ್ದಂ=ಒಂದು ವರುಷಮನಿರ್ದ್ದಂ

115. ವಿಶೇಷಣ ಪದಗಳು ಪ್ರಥಮಾವಿಭಕ್ತಿಯನ್ನು ಪಡೆದು ವಾಕ್ಯದ ಮೊದಲಲ್ಲಿ ಇರಲಾಗಿ, ಅನ್ವಯಿಸುವಲ್ಲಿ, ಅವು ತುದಿಯ ಕಾರಕ ಪದದ ವಿಭಕ್ತಿಯನ್ನೆ ಧರಿಸುವವು. Construction of adjectives.

ಪ್ರಯೋಗ:

ವೀರಂ ಉದಾರಂ ಗಂಭೀರಂ ನಯಶಾಲಿ ಕೈದು ವೊತ್ತರ ದೇವಂಗ್ ಆರ್ ಎರಗರ್?

ಅನ್ವಯ: ವೀರಂಗೆ (ವೀರನಾದಂಥಾ), ಉದಾರಂಗೆ, ಗಂಭೀರಂಗೆ, ನಯಶಾಲಿಗೆ, ಕೈದುವೊತ್ತರ ದೇವಂಗೆ (ಆಯುಧ್ಧ ಧರಿಸಿದಂಥಾವರ ಒಡೆಯ=ಅರಸಂಗೆ), ಆರ್ ಎರಗರ್?

116. ಕಾರಕ ಪದಕ್ಕೂ ಕ್ರಿಯಾಪದಕ್ಕೂ ನೇಯದ ದೋಷವಿಲ್ಲದೆ, ಅಂತು ಅಧ್ಯಾರೋಪ ಮಾಡುವದು.—ವಿಶಂಕೆಯ ಎತ್ವಕ್ಕೂ, ಸಮುಚ್ಚಯದ ಉಮವಿಗೂ ಅಧ್ಯಾರೋಪವು ಉಂಟು. Ellipsis.

## ಪ್ರಯೋಗ:

ನೇಯದ (ನ್ಯಾಯದ) ದೋಷಕ್ಕೆ: ಆಕಾಶ ಸಂಧ್ಯಾರುಚಿಯಿಂದ ಕೆಂಪಾಗುವದು. ಕಾವ್ಯದಲ್ಲಿ ಅದು ನೀರಳೆಹಣ್ಣಿನಿಂದ ಕೆಂಪಾಯಿತು ಅಂದರೆ, ಅವು ಆಕಾಶಕ್ಕೆ ಹ್ಯಾಗೆ ಹೋದವು ಎಂಬಂತೆ ಅನುಮಾನವಾಗಿ, ಸಂಧಾನ ತೋರುವದಿಲ್ಲ. ಆದರೆ ಆಗಸಂ ಕೆಂಧೂಳಿಯಿಂದ ಕೆಂಪಾದುದು ಅಂದರೆ ನೇಯವಾಗುವದು; ಯಾಕಂದರೆ ಕೆಂಧೂಳಿ ಗಾಳಿಯಿಂದ ಆಕಾಶಕ್ಕೆ ಹೋಗುವದುಂಟು.

ಕಾರಕಕ್ಕೆ: ಏಕೆ ನಿರ್ವಹಣಕ್ಕೆ ಸಲ್ಗುವೊ, ಪೂರ್ಣೋದ್ದಂ ಕೃತಿ ಬಂಧಮಂ? ಎಂಬಲ್ಲಿ ಏಕೆ—ಸಲ್ಗುವೊ ಎಂಬ ವಾಕ್ಯಕ್ಕೆ ಕೃತಿಬಂಧಂ ಎಂಬುದು ಅಧ್ಯಾರೋಪಿಸಿ ಕೊಳ್ಳ ತಕ್ಕ ಕಾರಕ ಪದ.

ಕ್ರಿಯೆಗೆ: ದೇವಾವತಾರಂ ಮನುಷ್ಯ ಮಾತ್ರನೆ ಎಂಬಲ್ಲಿ ಅಲ್ಲ ಎಂಬ ಕ್ರಿಯಾಪದ ಅಧ್ಯಾಹಾರ್ಯವಾಗಿದೆ.

ವಿಶಂಕೆಯ ಎತ್ವಕ್ಕೆ: ಬೆರ್ಕ್ಕಮೆ ದೇವ! ಎಂಬಲ್ಲಿ, ಇಲ್ಲವೆಂದು ಅಧ್ಯಾರೋಪಿಸ ಬೇಕು.

ಉಪಮೆಗೆ: ಆಯುಂ ಸಿರಿಯುಂ ತಾಯುಂ ತಂದೆಯುಂ ಕಣ್ಣುಂ ಗತಿಯುಂ ಎನಿಸಿದಪಂ ನರಪತಿಯುಂ— ಎಂಬಲ್ಲಿ, ಅರಸನಲ್ಲದೆ ಇನ್ನು ಬೇರೊಬ್ಬರು ಆಯುಂ—ಎನಿಸಿದಪರ್ ಎಂದು ಅಧ್ಯಾರೋಪಿಸ ಬೇಕು.

ಅವನುಂ ಇವನುಂ ಬಂದನೆಂಬಲ್ಲಿ ಅವನುಂ ಬಂದಂ ಇವನುಂ ಬಂದಂ ಎಂದು ಅಧ್ಯಾರೋಪಿಸ ಬೇಕು.

ವಿಭಕ್ತಿ ಪರಿಣಾಮಕ್ಕೆ: ಪ್ರಥಮೆಗೆ: (ಆತಂ) ಕಡುಗಲಿ

ದ್ವಿತೀಯೆಗೆ: (ಆತನಂ) ಸೈಸುವ ಭಟರಾರ್?

ತೃತೀಯೆಗೆ: (ಆತನಿಂ) ಒಡೆಯಂಗೆತಿ ಪಿತರಾರ್?

ಚತುರ್ಥಿಗೆ: (ಆತಂಗೆ) ಧುರಕ್ಕೊದಗುವರಾರ್?

ಪಂಚಮಿಗೆ: ತೊಡರ್ದೊಡೆ, (ಆತನತ್ತಣಿಂ) ಭಂಗಂ ಬರ್ಪುದು.
ಷಷ್ಠಿಗೆ: (ಆತನ) ಸಡಗರಮಿದು.
ಸಪ್ತಮಿಗೆ: (ಆತನೊಳ್) ಜಯಮೆ ಮೆರೆವುದು. ಈ ರೀತಿಯಿಂದ ಅಧ್ಯಾರೋಪಿಸಿ ಕೊಳ್ಳ ಬೇಕು.

117. ಜಾತಿಯಲ್ಲಿ ಏಕವಚನ ಇದ್ದರೂ, ಬಹುವಚನವ ಹೇಳುವದು; ಅದು ಕಾರಣ ಕ್ರಿಯಾಪದ ಬಹುವಚನ ಹೊಂದಲಾಗುವದು; ಜಾತಿಯಲ್ಲದಲ್ಲಿಯೂ ಬಹುವಚನಕ್ಕೆ ಏಕವಚನವು ವಿಶೇಷಣವಾಗಿ ನಿಂತರೂ, ಬಹುವಚನವನ್ನು ಹೇಳುವದು.

Nouns in the singular with verbs in the plural.

ಪ್ರಯೋಗ:

ಜಾತಿಗೆ: ಕಾಲಾಳ್ಗಳ್ ಕವಿದವು=ಕಾಲಾಳ್ ಕವಿದವು. ಕುದುರೆಗಳ್ ಏರಿದುವು=ಕುದುರೆ ಏರಿದುವು. ದನ ತುಟ್ಟಿಯಾದವು.
ಜಾತಿಯಲ್ಲದಲ್ಲಿಗೆ: ಲೋಕ ಮಹದೈಶ್ವರ್ಯಂಗಳ್ ಇವೆಲ್ಲಂ ಅಧ್ರುವಂ (ಇವೆಲ್ಲಂ ಅಧ್ರುವಂಗಳ್).—ಮನಂ ಸಂಚಲಂ ಆದುವು (ಮನಂಗಳ್ ಸಂಚಲಂಗಳ್ ಆದುವು.)
ಕರ್ತೃ ಏಕವಚನದಲ್ಲಿ ಅಥವಾ ಬಹುವಚನದಲ್ಲಿ ಇರುವದು; ಕ್ರಿಯಾಪದವು ಬಹುವಚನದಲ್ಲಿ ಮಾತ್ರ, ವಿಶೇಷಣ ಪದವು ಏಕವಚನದಲ್ಲಿ ಮಾತ್ರ ಬರುವದು.

118. ವಿಶೇಷಣವಾಗಿ ಕಾರಕ ಪದವು ಏಕವಚನದಲ್ಲಿ, ಹಾಗೂ ಕ್ರಿಯಾಪದವು ಏಕವಚನದಲ್ಲಿ ಇದ್ದರೆ, ವಿಶೇಷ್ಯವಾದ ಜಾತಿಗೆ ಏಕತ್ವವಲ್ಲದೆ ಬಹುತ್ವವಿಲ್ಲ.

Nouns and verbs in the singular exceptions.

ಪ್ರಯೋಗ:

ಕಾರಕಕ್ಕೆ: ಇಂತುಟು ಕುದುರೆ ಬಂದುದು.—ಹೀಗೆ ಹೇಳಿದ ಮೇಲೆ, ಇಂತುಟು ಕುದುರೆಗಳು ಬಂದುದು ಎಂಬುದು ದೋಷ.

ಕ್ರಿಯೆಗೆ: ಕೇಳಿದುದು ಸೋಗೆ–(ಕೇಳಿದುದು ಸೋಗೆಗಳ್ ಎಂಬುದು ದೋಷ.)—ಆದರೆ ಬಹಳವಾಗಿ ಕ್ರಿಯಾಪದಕ್ಕೆ ಬಹುವಚನ ಉಂಟು:

ಆ ಎರಳೆ ಪೋದುವು. ಈ ಹುಲ್ಲೆ ಬಂದುವು.

ಅಪವಾದಕ್ಕೆ: ಬಸರಿತು ಕಲ್ಗಳ್. ಅಸ್ತ್ರಮಯುವಾದುದು ಏಣ್ದೆಸೆಗಳ್ ಜಾತಿ ಇಲ್ಲದಲ್ಲಿ ಹೀಗೆ ಹೇಳಲಾಗುವದು ಎಂಬಂತೆ ತೋರುತ್ತದೆ.

Different use of number.

**119.** ಸಂಖ್ಯಾವಸ್ತುವಿನಲ್ಲಿಯೂ, ಸಂಖ್ಯೆಯಲ್ಲಿಯೂ, ಭಾವದಲ್ಲಿಯೂ ನೆಲಸಿರುವ ಏಕವಚನ ಬಹುವಚನವನ್ನು ಹೇಳುವದು. ವಿಶೇಷಣವು ಬಹುವಚನವಾದರೆ, ವಿಶೇಷ್ಯ ಪದವು ಏಕವಚನವ ಹೊಂದಲಾಗುವದು.

ಪ್ರಯೋಗ:

ಸಂಖ್ಯಾವಸ್ತುವಿಗೆ: ಪತ್ತುದೆಸೆ=ಪತ್ತುದೆಸೆಗಳ್.—ಮೂಲೋಕಂ.
ಸಂಖ್ಯಾವಾಚಿಗೆ: ಎರಪ್ಪೈದು=ಎರಪ್ಪೈದುಗಳ್.
ಭಾವಕ್ಕೆ: ಕಣ್ಗಳ್ ಕರ್ಪು, (ಕಣ್ಗಳ ಕರ್ಪುಗಳ್) ಪೂಗಳ್ಬೆಳ್ಪು.
ವಿಶೇಷ್ಯದ ಏಕವಚನಕ್ಕೆ: ನೇರಿದುವು (ನೆಟ್ಟಗಾದವು) ಬೆರಲ್; ಬಟ್ಟಿದುವು (ಬಿಗಿದವು) ಮೊಗ.

**120.** ಯುಗಳಾರ್ಥದಲ್ಲಿ ವರ್ತಿಸುವ ಬಹುವಚನಕ್ಕೂ, ಆವಿಷ್ಟ ಲಿಂಗಕ್ಕೂ, ಕ್ರಿಯಾವಿಶೇಷಣಕ್ಕೂ ಏಕವಚನ ಪ್ರಾಪ್ತಿಸುವದು.

ಪ್ರಯೋಗ:

ಪದಯುಗಳಗಳಿಗೆ: ಪದಯುಗಂ (ದೋಷಕ್ಕೆ: ಪದಗಳ ಯುಗಂ)
ಆವಿಷ್ಟ ಲಿಂಗಕ್ಕೆ: ವೇದಗಳ್ ಪ್ರಮಾಣಂ (ದೋಷಕ್ಕೆ: ಪ್ರಮಾಣಗಳ್).
ಕ್ರಿಯಾವಿಶೇಷಣಕ್ಕೆ: ದೋಷರಹಿತಂ ಪೇಳ್ದಂ=ದೋಷರಹಿತವಾಗಿ (ದೋಷರಹಿತವಾದವುಗಳನ್ನು).

ಪೇಳ್ದಂ: ಅರಸನುಂ ಪ್ರಧಾನಿಯುಂ ದಾನಿಗಳೊಳ್ ಅಂಭೋನಿಧಿಯುಂ (ಅಂಭೋನಿಧಿಗಳ್ ಎಂಬುದು ದೋಷ.)

121. ಪ್ರಥಮೈಕವಚನವನ್ನು ಮೊದಲಲ್ಲಿ ಹಲವನ್ನು ಹೇಳಿ ವಾಕ್ಯನಿರ್ವಾಹದಲ್ಲಿ ಕ್ರಿಯಾಬಹುವಚನವನ್ನು ಹೊಗಿಸುವರು.

ಪ್ರಯೋಗ:

ಕಟ್ಟಿಗೆ ಹಾಲು ಬೆಂಕೆ ಬಂದುವು.—ದಾನ ಧರ್ಮ ಮಾಡಿದನು.

ಹಣ ವಸ್ತ್ರ ಊಟ ಮನೆ ಕೊಟ್ಟಂ ಎಂಬಲ್ಲಿ ಇವೆಲ್ಲನ್ನು ಕೊಟ್ಟನು ಎಂದು ಅಧ್ಯಾಹಾರ ಮಾಡುವದು.

122. ಕೆಲ ಕೆಲವು ಸಂಸ್ಕೃತದ ಮೂರು ಲಿಂಗವು ಕನ್ನಡಕ್ಕೆ ಬಂದಲ್ಲಿ, ನಪುಂಸಕವಾಗುವದು. ಸಜ್ಜನಶಬ್ದಕ್ಕೂ ಸ್ತ್ರೀಯನ್ನು ಹೇಳುವಾಗ, ಕನ್ನಡದಲ್ಲಿ ಎಂದೂ ನಪುಂಸಕವೆ ಆಗುವದು. Of gender.

ಪ್ರಯೋಗ:

ಲಿಂಗತ್ರಯಕ್ಕೆ: ವೃಕ್ಷಂ ತಳಿರ್ತುದು (ಸಂಸ್ಕೃತದಲ್ಲಿ ವೃಕ್ಷಂ ಪುಲ್ಲಿಂಗ).

ಧರೆ ಬೆಳೆದುದು (ಸಂಸ್ಕೃತದಲ್ಲಿ ಧರೆಗೆ ಸ್ತ್ರೀಲಿಂಗ).

ಕುಲಂ ಮೇಲೆನಿಸಿದುದು (ಕುಲಕ್ಕೆ ನಪುಂಸಕಲಿಂಗ).

ಸಜ್ಜನಶಬ್ದಕ್ಕೆ: ಆ ಸತಿ ಸಜ್ಜನಂ.—ಸಮುಚ್ಚಯದಿಂದ ಅಪತ್ಯ (ಮಕ್ಕಳು) ಕಳತ್ರ (ಹೆಂಡತಿ) ಪುರುಷವಾಚಿಕಗಳಾದ ಜನ, ಲೋಕ ಎಂಬಿವು ಕನ್ನಡದಲ್ಲಿ ನಪುಂಸಕವು;—ಹ್ಯಾಗಂದರೆ: ಇದು ಕಳತ್ರಂ, ಇದು ಅಪತ್ಯಂ, ಇದು ಜನಂ, ಇದು ಲೋಕಂ.

123. ಜನ ಎಂಬ ಶಬ್ದವು ನಿಜದಿಂದ ನಪುಂಸಕ; ದುಸ್ ಎಂಬುದು ಸತ್ ಎಂಬುದು ಸು ಎಂಬುದು ಅದಕ್ಕೆ ಕೂಡಿದರೆ, ಪುಲ್ಲಿಂಗವಾಗುವದು.—ಅದಲ್ಲದೆ ಮಹತ್ ಎಂಬ ಶಬ್ದ ಹಿಂದಿದ್ದರೆ, ನಪುಂಸಕವಾಗುವದು. Different genders of ಜನ.

ಪ್ರಯೋಗ:

ಪುಲ್ಲಿಂಗಕ್ಕೆ: ದುರ್ಜನಂ—ಸಜ್ಜನಂ—ಸುಜನಂ ಬಂದಂ.
ನಪುಂಸಕಕ್ಕೆ: ಮಹಜ್ಜನಂ ಬಂತು.

Gender implied in words.

124. ವಿಶೇಷಣದ ಲಿಂಗದ ಇಷ್ಟದಿಂದ ವಿಶೇಷ್ಯವನ್ನು ಆಲಿಂಗವಾಗಿ ಯೋಚಿಸಿ ಕೊಳ್ಳುವದು.— ವಿಶೇಷ್ಯದ ಲಿಂಗದ ಇಷ್ಟದಿಂದ ವಿಶೇಷಣವನ್ನು ಆಲಿಂಗವಾಗಿ ಯೋಚಿಸಿ ಕೊಳ್ಳುವದು.— ಇದು ರೂಪಕದಲ್ಲಿ ನಿರ್ದೋಷ.

ಪ್ರಯೋಗ:

ವಿಶೇಷಣಕ್ಕೆ: ಕಾಂಚೀಕಲಾಪಾಂಚಿತಾಸ್ಪದೆಯಂ (ಸಮುದ್ರವೆಂಬ ಡಾಬು ಎಂಬುವ ಆಭರಣದಿಂದ ಪೂಜ್ಯವಾದ ಆಸ್ಪದವುಳ್ಳಾಕೆಯನ್ನು=ಭೂಮಿಯನ್ನು) ಸಾಧಿಸಿ ಕಬ್ಬಿಗಂಗೆ ನೆಲಂ ನಿಮಿರ್ಚಿದಂ (ಕೊಟ್ಟಂ).—ಇಲ್ಲಿ ನೆಲನಂ ಎಂಬ ವಿಶೇಷ್ಯ ಪದಕ್ಕೆ—ಆಸ್ಪದೆಯಂ ಎಂಬ ವಿಶೇಷಣ ಪದದ ಸ್ತ್ರೀಲಿಂಗವ ಯೋಚಿಸಿ ಕೊಳ್ಳಬೇಕು.

ವಿಶೇಷ್ಯಕ್ಕೆ: ಆತಂ ಜಗದ್ದರ್ಪಣಂ, ಆ ಪೆಣ್ಜಗದ್ದರ್ಪಣಂ.— ಅದು ಜಗದ್ದರ್ಪಣಂ.

ಇಲ್ಲಿ ಆತಂ ಮುಂತಾದ ವಿಶೇಷ್ಯಗಳ ಲಿಂಗವನ್ನು ಜಗದ್ದರ್ಪಣಂ ಎಂಬ ವಿಶೇಷಣಕ್ಕೆ ಯೋಚಿಸಿ ಕೊಳ್ಳ ಬೇಕು.

125. ಸರ್ವನಾಮಗಳೂ ಗುಣವಚನಗಳೂ ಬಹುವ್ರೀಹಿ ಶಬ್ದಗಳೂ ಕೃದ್ವಾಚಿಗಳೂ ತದ್ಧಿತ ಶಬ್ದಗಳೂ ಸಂಖ್ಯಾವಾಚಿಗಳೂ ಇವೆಲ್ಲಕ್ಕೆ ವಿಶೇಷ್ಯಾಧೀನಲಿಂಗವೆಂದು ತಿಳಿಯ ಬೇಕು.—ತಾವು ವಿಶೇಷಿಸುವ ವಿಶೇಷ್ಯ ಪದಗಳಿಗೆ ಯಾವ ಲಿಂಗ ಇರುತ್ತದೊ ಅದೆ ಅವಕ್ಕೆ ಹತ್ತುವದು.

ಪ್ರಯೋಗ:

ನೀನ್, ಅನ್, ತಾನ್ ಎಂಬ ಮೂರು ಲಿಂಗಗಳಲ್ಲಿ ರೂಪಾಂತರವಾಗದ ಸರ್ವನಾಮಗಳಿಗೆ: ನೀಂ ಕಳ್ಳಂ — ನೀಂ ಕಳ್ಳಿ — ನೀಂ ಪಶು.

ರೂಪಾಂತರವಾಗುವ ಸರ್ವನಾಮಕ್ಕೆ: ಅವಂ ಮಗಂ, ಅವಳ್ ಮಗಳ್, ಅದು ಮಗು. ಪೆರಂ — ಪೆರಳ್ — ಪೆರತು.

ಗುಣವಚನಕ್ಕೆ: ಇನಿಯಂ — ಇನಿಯಳ್ — ಇನಿದು.

ಬಹುವ್ರೀಹಿಗೆ: ಅವಂ — ಅವಳ್ — ಅದು ವಿಮಲಮತಿ.—ಅವಂ — ಅವಳ್ — ಅದು ಹೇಡಿ, ಸುಖಿ, ಸಾಧು.

ಕೃದ್ವಾಚಿಗೆ: ಪಾಡಿದಂ, ಪಾಡಿದಳ್, ಪಾಡಿದುದು.—ಪಾಡಿದನಂ, ಪಾಡಿದಳಂ, ಪಾಡಿದುದಂ.

ತದ್ಧಿತಕ್ಕೆ: ಅವಂ — ಅವಳ್ — ಅದು ಓದಾಳಿ.

ಸಂಖ್ಯೆಗೆ: ಸಾವಿರ ಗಂಡರು, ಸಾವಿರ ಪೆಂಡರ್, ಸಾವಿರ ಮನೆಗಳ್.

126. ಕೂಡಿ ನುಡಿಯುವ ಲಿಂಗತ್ರಯಕ್ಕೆ ತಮ್ಮೊಳಗೆ ಮುಖ್ಯತೆ ಇಲ್ಲ. ವಾಕ್ಯದ ಕಡೆಯಲ್ಲಿ ಕೂಡಿದ ಲಿಂಗ ಯಾವದು ಅದುವೆ ಮುಖ್ಯವಾಗುವದು.

ಪ್ರಯೋಗ:

ಸೇನೆಯುಂ ಅರಸಿಯುಂ ಅರಸಂ ಬಂದರ್.

ಅರಸನುಂ, ಅರಸಿಯುಂ ಚತುರಂಗ ಬಲಮುಂ ಬಂದವು.

127. ಏಕ ಬಹುವಚನಗಳ ಮಧ್ಯಮ ಪುರುಷ ಬಂದರೂ, ಅಸಹ್ಯವೃತ್ತಿಯಲ್ಲಿ ಕ್ರಿಯಾಪದಕ್ಕೆ ಬಹುವಚನದ ಪ್ರಥಮ ಪುರುಷ ಆಗುವದು. ಈ ಪ್ರಯೋಗ ವರ್ತಮಾನ ಭವಿಷ್ಯಂತಿಗಳಲ್ಲಿ ಮಾತ್ರ ಉಂಟು. ಅಸಹ್ಯವೃತ್ತಿಯಲ್ಲಿ ಪುಲ್ಲಿಂಗಕ್ಕೂ ಸ್ತ್ರೀಲಿಂಗಕ್ಕೂ ನಪುಂಸಕಲಿಂಗ ಬರುವದು. **A singular construction.**

ಪ್ರಯೋಗ:

ನೀನು ಮರುಳೆಹರೆ? ನೀವು ಅರಸರಾದ ಮೇಲೆ, ಕಂಡಲ್ಲಿ ತಿರುಗುವರೆ? ನೀವು ಹೀಗೆ ಮಾಡುತ್ತಾರೇ? ಅದು (ಅವನು, ಅಥವಾ ಅವಳು) ಊರಿಗೆ ಹೋದೀತು.

Of the persons of verbs.

128. ಪುರುಷತ್ರಯ ಕ್ರಮದಿಂದಿದ್ದರೂ, ವ್ಯತ್ಯಯದಿಂದ ಇದ್ದರೂ, ಕೂಡಿ ನುಡಿಯುವಲ್ಲಿ ಉತ್ತಮ ಪುರುಷಕ್ಕೆ ಮುಖ್ಯತ್ವ.—ಉತ್ತಮ ಪುರುಷವನ್ನು ಕಳೆದು ಉಳಿದ ಪ್ರಥಮ ಮಧ್ಯಮ ಪುರುಷಗಳನ್ನು ಕ್ರಮದಿಂದ ಇದ್ದರೂ, ವ್ಯತ್ಯಯದಿಂದಿದ್ದರೂ, ಕೂಡಿ ನುಡಿಯುವಲ್ಲಿ, ಮಧ್ಯಮ ಪುರುಷಕ್ಕೆ ಮುಖ್ಯತ್ವ. ಯುಗಪದುಕ್ತಿಯಲ್ಲಿ ಪ್ರಥಮ ಪುರುಷಕ್ಕೆ ಮುಖ್ಯತ್ವವಿಲ್ಲ.

ಪ್ರಯೋಗ:

ಉತ್ತಮ ಪುರುಷ ಮುಖ್ಯತ್ವಕ್ಕೆ: ಆತನುಂ ನೀನುಂ ಆನುಂ ಪೊರಗಾಗಿರ್ದೆವು.
ವ್ಯತ್ಯಯಕ್ಕೆ: ನೀನುಂ ಆನುಂ ಆತನುಂ ನಗರಕ್ಕೆ ಪೋಪೆವು.—ಆತನುಂ ಆನುಂ ನೀನುಂ ಕಜ್ಜದ ತೆರವನರಿದು ಪೇಳ್ದೆವು.
ಮಧ್ಯಮ ಪುರುಷ ಮುಖ್ಯತ್ವಕ್ಕೆ: ಆತನುಂ ನೀನುಂ ಕೂಡಿದಿರ್.
ವ್ಯತ್ಯಯಕ್ಕೆ: ನಾಳಿನ ದಿನದೊಳ್ ನೀನುಂ ಆತನುಂ ಕೂಡಿದಪಿರ್.

In the negative mood the past tense implied.

129. ಕಾಲತ್ರಯಗಳನ್ನು ಹೇಳುವ ಮೂರು ಕ್ರಿಯಾಪದಗಳಲ್ಲಿ ಪ್ರತಿಶೇಧ ಕ್ರಿಯೆ ಬಂದರೆ, ವಿಶೇಷವಾಗಿ ಭೂತಕಾಲಾರ್ಥದಲ್ಲಿಯೆ ಸಲ್ಲುವದು. ಆದರೆ ವರ್ತಮಾನ ಭವಿಷ್ಯಂತಿ ಕಾಲಾರ್ಥವು ಸುಧಾ ಆಗುವದು.

ಪ್ರಯೋಗ:

ಮಾಡಂ ಎಂಬಲ್ಲಿ ವಿಶೇಷವಾಗಿ ಮಾಡಲಿಲ್ಲ ಎಂಬರ್ಥ.

130. ಇನೆಗಂ–ಉದುಂ–ಅನ್ನಂ–ಅನ್ನೆಗಂ–ಇನಂ, ಅಲೊಡಂ ಎಂಬಿವು ಸೊಂನೆ ಗೂಡಿದಲ್ಲದೆ ಇರವು; ಇವು ಸತಿ ಸಪ್ತಮಿಯ ಎಕಾರಕ್ಕೆ ಆದೇಶವಾಗಿ ಬಂದವು. Old form of the infinitive with ಎ.

ಪ್ರಯೋಗ:

ಸತಿಸಪ್ತಮಿಯ ಎಕಾರಕ್ಕೆ: ನುಡಿಯೆ, ಪೋಗೆ=ನುಡಿಯಲಾಗಿ, ನುಡಿಯುವ ಹಾಗೆ.

ಆದೇಶಗಳಿಗೆ: ನುಗ್ಗಪ್ಪಿನೆಗಂ=ನುಗ್ಗಾಗೆ.—ಬರವೇಳ್ ಎಂಬುದುಂ=ಬರವೇಳ್ ಎನೆ.—

ಇಳಿವನ್ನಂ=ಇಳಿಯೆ.—ನೆರಂ ಬರ್ಪ್ಪಿನೆಗಂ=ನೆರಂಬರೆ.—ಪುಗುವಿನಂ=ಪುಗೆ.—

ನುಡಿಯಲೊಡಂ=ನುಡಿಯೆ.—ಬರಲೊಡನೆ ಕೊಟ್ಟಂ=ಬರೆ ಕೊಟ್ಟಂ.

131. ಅನ್ನೆಗಂ, ಅನ್ನಂ, ಇನೆಗಂ, ಇನಂ ಎಂಬಿವು ಭವಿಷ್ಯಂತಿಯ ಕೃದ್ವಾಚಿಯ ಮೇಲೆ ಬಂದು, ವರ್ತಮಾನದಲ್ಲಿಯೂ ಭವಿಷ್ಯಂತಿಯಲ್ಲಿಯೂ ವರ್ತಿಸುವವು—ಉದುಂ, ಅಲೊಡಂ ಎಂಬಿವು ಭೂತವತಿಯಲ್ಲಿ ಸಲ್ಲುವವು. Construction of ಅನ್ನೆಗಂ etc.

ಪ್ರಯೋಗ:

ಅನ್ನೆಗಂ ಎಂಬುದಕ್ಕೆ: ನೆನೆವನ್ನೆಗಂ ಬಂದಂ.—ಅನ್ನಂ ಎಂಬುದಕ್ಕೆ ನುಡಿವನ್ನಂ ನಿಂತಂ=ನುಡಿಯುವನಕಾ—

ಇನೆಗಂ ಎಂಬುದಕ್ಕೆ: ಬಿನ್ನೈಸುವಿನೆಗಂ ಎರ್ದೆಗೊಂಡಂ.—ಇನಂ ಎಂಬುದಕ್ಕೆ: ಬೆಳಗಪ್ಪಿನಂ ಕೇಳಿಸಿದಂ—

ಉದುಂ ಎಂಬುದಕ್ಕೆ: ಓಲಗಂ ಪರೆಯುದುಂ ಆಲೋಚನೆಗೆ ಪೊಕ್ಕಂ—

ಅಲೊಡಂ ಎಂಬುದಕ್ಕೆ: ಬರಲೊಡಂ ನುಡಿದಂ—

132. ವರಂ, ವರೆಗಂ, ಎಂಬ ಸೀಮಾರ್ಥ ಶಬ್ದವು ಪರದಲ್ಲಿ ಇದ್ದ Use of ವರಂ etc.

ರೆ, ಅನ್ನೆಗಂ, ಇನೆಗಂ, ಎಂನೆಗಂ ಎಂಬದರ ಗಕಾರಕ್ಕೆ ಲೋಪ ಉಂಟು. ಮುಟ್ಟೆ ಎಂದು ಸೀಮಾರ್ಥವಾಗುವದು.

ಪ್ರಯೋಗ:

ಎನೆವರಂ ಸಿರಿತಮಗುಂಟು, ಅನ್ನೆವರಂ ಸೇವ್ಯರತ್ತಿ ಖಳರುಂ. (ಎಲ್ಲಿಯ ತನಕ ಸಿರಿ ತಮಗೆ ಉಂಟೊ ಅಲ್ಲಿಯ ತನಕ ಕೆಟ್ಟವರು ಸೇವ್ಯರಲ್ಲವೆ.) ಇನ್ನೆವರಂ ಗುರಿಯಾದುದಿಲ್ಲ ಬಾಣಹತಿಗೆ. ವಾರ್ಧಿ (ಸಮುದ್ರ) ಮುಟ್ಟೆ ಪೋದಂ.

Use of ಅಲ್.

133. ಸತಿ ಸಪ್ತಮಿಯ ಎಕಾರಕ್ಕೆ ಬದಲಾಗಿ ಕೆಲವರು ಅಲ್ ಎಂದು ಹೇಳುವರು; ಆದರೆ ಈ ಪ್ರಯೋಗಕ್ಕೆ ಚದುರರು ಒಡಂಬಡುವದಿಲ್ಲ; ಅಲೊಡಂ ಎಂದು ಹೇಳುವದು ಶುದ್ಧ.

ಪ್ರಯೋಗ:

ಅಲ್ಗೆ: ಇವಂ ನುಡಿಯಲ್ ಅರಸಂ ಬಂದಂ.
ಶುದ್ಧಕ್ಕೆ: ಗಾಳಿ ಬೀಸಲೊಡಂ ಎಲೆ ಕಳಲ್ದುವು.

Formation of the conditional mood with ಒಡೆ.

134. ಪ್ರಕ್ನಾರ್ಥವನ್ನು ಹೇಳುವ ಒಡೆ ಎಂಬ ಶಬ್ದವು ಲಿಂಗತ್ರಯ ವಚನತ್ರಯ ಪುರುಷತ್ರಯ ಕಾಲತ್ರಯಗಳಲ್ಲಿ ವ್ಯವಹರಿಸುವದು. ಒಡಂ ಎಂಬುದು ಸಮುಚ್ಚಯಾರ್ಥದಲ್ಲಿ ಬರುವದು. ಭೂತಕಾಲದ ಶಬ್ದ ನ್ಯೂನಕ್ಕೆ ಆ ಪ್ರತ್ಯಯ ಹತ್ತಿದರೆ, ಭೂತಾರ್ಥವು, ಭವಿಷ್ಯತ್ಕಾಲದ ಶಬ್ದ ನ್ಯೂನಕ್ಕೆ ಬಂದರೆ, ಭವಿಷ್ಯತ್ಕಾಲಾರ್ಥ ಆಗುವದು. ಪುರುಷಪ್ರತ್ಯಯ ಕಳೆದ ವರ್ತಮಾನ ಕಾಲದ ರೂಪಕ್ಕೆ ವರ್ತಮಾನ ಕಾಲಾರ್ಥದಲ್ಲಿ ಹತ್ತುವದು. ಅದಲ್ಲದೆ ಪ್ರತಿಷೇಧದ ಕೃದ್ವಾಚಿಯ ಕಡೆಗೆ ಪ್ರತಿಷೇಧಾರ್ಥದಲ್ಲಿ ಬರುವದು.

ಪ್ರಯೋಗ:

ಭೂತಕಾಲಕ್ಕೆ: ನಾನು ಮಾಡಿದೊಡೆ, ನೀನು ಮಾಡಿದಡೆ, ಅವನು ಮಾಡಿದೊಡಂ, ಮಾಡಿದೊಡೆಯುಂ.

ವರ್ತಮಾನ ಕಾಲಕ್ಕೆ: ಅವರು ಪಳಂಚಿದಪೊಡೆ,–ಕೊಂದಪರ್; ಅವು ಒದರಿದ ಪೊಡೆ, ಬಂದಪ್ಪುವು; ನಾವು ಪುಸಿದ ಪೊಡಂ.

ಭವಿಷ್ಯಂತಿಗೆ: ನೀವು ಚಿತ್ರಿ ಪೊಡೆ, ತೂಲಿಕೆಯಂ (ಕಂಠ) ತರಿಸಿ! ಹುಲಿ ಸಿಕ್ಕುವಡೆ, (ಶಿಕ್ಕುವರೆ), ಬಲೆ ಬೀಸು! ಅವಳ್ ಬೈವೊಡಂ, ಸುಮ್ಮನಿರು!

ಪ್ರತಿಷೇಧಕ್ಕೆ: ನೀವು ಕೊಳ್ಳದಡೆ, ಅವಂ ಇರದಡೆ–ಅವರ್ ಕಟ್ಟದೊಡೆ–ಕಟ್ಟದೊಡಂ.

135. ಶಕ್ಯವೆಂತಲೂ ಲಕ್ಷ್ಯವೆಂತಲೂ ಪದಗಳಿಗೆ ಅರ್ಥ ಎರಡು ವಿಧವು. ಶಕ್ಯಾರ್ಥ ಹ್ಯಾಗಂದರೆ: ಶಕ್ತಿ ಎಂಬ ವೃತ್ತಿಯಿಂದ ಪದದಲ್ಲಿ ಇರುವ ಅರ್ಥ. Of the meaning (proper meaning) of words.

ವ್ಯಾಕರಣದಿಂದಲೂ, ನಿಘಂಟುಗಳಿಂದಲೂ, ಉಪಮಾನದಿಂದಲೂ, ಆಪ್ತ ವ್ಯಾತ್ಸದಿಂದಲೂ, ಹಿರಿಯರ ವ್ಯವಹಾರದಿಂದಲೂ, ವ್ಯಾಖ್ಯಾನದಿಂದಲೂ, ಅರ್ಥವನ್ನು ತಿಳಿಯುವದು ಶಕ್ತಿ ಎನಿಸುವದು.

136. ಶಕ್ಯಾರ್ಥ ರೂಢವೆಂತಲು, ಯೋಗವೆಂತಲು, ಯೋಗರೂಢವೆಂತಲು ಮೂರು ವಿಧ.—ನಿಘಂಟು ವ್ಯಾಕರಣ ವೊದಲಾದವುಗಳಲ್ಲಿ ಪ್ರಸಿದ್ಧವಾದ ಅರ್ಥವು ರೂಢವೆನಿಸುವದು. ವ್ಯಾಕರಣದಲ್ಲಿ ಹೇಳಿದ ಪ್ರಕಾರ, ಅವಯವಾರ್ಥದಿಂದ (ಶಬ್ದದ ಭಾಗಗಳ ಅರ್ಥದಿಂದ) ತಿಳಿಯುವ ಅರ್ಥವು ಯೋಗವು.—ಅವಯವಾರ್ಥವಿದ್ದರೂ, ಸಮುದಾಯದಿಂದ (ಬಹಳವಾಗಿ ಆಗುವ) ಅರ್ಥವನ್ನೆ ರೂಢವಾಗಿ ಹೇಳಿದರೆ, ಅದು ಯೋಗರೂಢವು.

ಪ್ರಯೋಗ:

ರೂಢಕ್ಕೆ: ಮರವು, ಗಿಡವು, ಕದವು, ಮನೆಯು.

ಯೋಗಕ್ಕೆ: ಗಾಣಿಗನು, ಅಂಜುಕುಳಿ, ಕುದರೆಗಾರ.

ಯೋಗರೂಢಕ್ಕೆ: ಪಂಕಜವು, ನೀರಜವು. ಇಲ್ಲಿ ಕೆಸರಲ್ಲಿಯೂ ನೀ

ರಲ್ಲಿಯೂ ನೈದಿಲೆ—ಕಪ್ಪೆ ಮೊದಲಾದವು ಅವಯವಾರ್ಥದಿಂದ ಹೇಳಲ್ಪಟ್ಟರೂ, ಸಮುದಾಯವು ತಾವರೆಯಲ್ಲೆ ರೂಢವಾದ್ದರಿಂದ, ಇದು ಯೋಗರೂಢವು.— ಭೂಪತಿ, ನರಪತಿ=ಅರಸನು. ದೇವರಿಗೆ ಸಹ ಹೀಗೆ ಅನ್ನ ಬಹುದಾದರೂ, ಇದು ಅರಸರಿಗೆ ಮಾತ್ರ ಯೋಗರೂಢನಾಮ.— ಭೂಧರ=ಗುಡ್ಡ; ಭೂಮಿಜ=ಗಿಡ.

Meaning of words implied

137. ಲಕ್ಷಣೆ ಎಂಬ ವೃತ್ತಿಯಿಂದ ತೋರುವ ಅರ್ಥವು ಲಕ್ಷ್ಯವು. ಅರ್ಥ ಪ್ರಕರಣ ಮೊದಲಾದವುಗಳಿಂದ ಶಕ್ಯಾರ್ಥವ ಹೇಳ ಕೂಡದೆ ಶಕ್ಯಾರ್ಥ ಸಂಬಂಧವುಳ್ಳದನ್ನು ಹೇಳಿದರೆ, ಅದು ಲಕ್ಷಣೆ. ಈ ಲಕ್ಷಣೆ ಶುದ್ಧ ಯೆಂತಲೂ ಗೌಣಿ ಯೆಂತಲೂ ಎರಡು ವಿಧವು.

138. ಜಹಲ್ಲಕ್ಷಣೆ ಯೆಂತಲೂ ಅಜಹಲ್ಲಕ್ಷಣೆ ಯೆಂತಲೂ ಜಹದಜಹಲ್ಲಕ್ಷಣೆ ಯೆಂತಲೂ ಈ ಪ್ರಕಾರ ಶುದ್ಧೆ ಮೂರು ವಿಧವು.

139. ಎಲ್ಲಿ ಶಕ್ಯಾರ್ಥಕ್ಕೆ ಅನ್ವಯವೇ ಇಲ್ಲವೊ, ಅಲ್ಲಿ ಜಹಲ್ಲಕ್ಷಣೆ ಯೆಂತ ತಿಳಿಯ ಬೇಕು. ಶಕ್ಯಾರ್ಥವ ಬಿಟ್ಟು ಅದನ್ನು ಶೇರಿದ ಮತ್ತೊಂದು ವಸ್ತುವ ಹೇಳುವದು.

ಪ್ರಯೋಗ:

ಊರು ಮೊರೆ ಇಡುತ್ತದೆ.—ಇಲ್ಲಿ ಊರಲ್ಲಿರುವ ಮನುಷ್ಯರು ಮೊರೆ ಇಡುತ್ತಾರೆ.—ಇಲ್ಲಿ ಊರ ಬಿಟ್ಟು ಅದರಲ್ಲಿರುವ ಮನುಷ್ಯರ ಹೇಳಿದ್ದರಿಂದ, ಜಹಲ್ಲಕ್ಷಣೆ.

140. ವಾಚ್ಯಾರ್ಥವ ಬಿಡದೆ ಅದನ್ನೂ ಅದರ ಸಂಬಂಧಿಗಳನ್ನೂ, ಹೇಳಿದರೆ, ಅದು ಅಜಹಲ್ಲಕ್ಷಣೆ.

ಪ್ರಯೋಗ:

ಕೊಡೆಯವರೂ ಹೋಗುತ್ತಾರೆ.— ಇಲ್ಲಿ ಕೊಡೆಯವರೂ ಕೊಡೆಯಿಲ್ಲದವರೂ ಎರಡು ತರದವರು ತೋರುತ್ತಾರೆ.— ಇಲ್ಲಿ ಕೊಡೆಯ

ವರ ಬಿಡದೆ ಅವರೊಂದಿಗೆ ಕೂಡಾ ಹೋಗುವವರನ್ನು ಸಹ ಹೇಳುತ್ತದೆಯಾದ್ದರಿಂದ ಅಜಹಲ್ಲಕ್ಷಣೆ.

141. ಜಹದಜಹಲ್ಲಕ್ಷಣೆ ಶಕ್ಯಾರ್ಥದಲ್ಲಿ ವಿಶೇಷಣಾಂಶವ ಬಿಟ್ಟು ವಿಶೇಷ್ಯ ಮಾತ್ರವನ್ನೆ ಹಿಡಿಯುವದು.

ಪ್ರಯೋಗ:

ಅದೇ ಇದು: ಇಲ್ಲಿ ಅದು ಶಬ್ದಕ್ಕೆ ದೂರ ದೇಶದ ಪರೋಕ್ಷಕಾಲದ ವಸ್ತುವರ್ಥವು; ಇದು ಶಬ್ದಕ್ಕೆ ಸಮೀಪ ದೇಶದ ವರ್ತಮಾನ ಕಾಲದ ವಸ್ತುವರ್ಥವು. ಇವೆರಡಕ್ಕೆ ಅಭೇದವು ಕೂಡದಾದ್ದರಿಂದ, ವಿಶೇಷ್ಯವಾದ ವಸ್ತು ಮಾತ್ರ ವಿಶೇಷಣವ ಬಿಟ್ಟು ತೋರುತ್ತದೆಯಾದ್ದರಿಂದ ಇದು ಜಹದಜಹಲ್ಲಕ್ಷಣೆ—ಲೋಕ ನಿರ್ಮಾಣ ಮಾಡಿದವನೆ ದೇವರು.

142. ಸಮಾನ ಧರ್ಮೈಕ್ಯದಿಂದ ಉಪಮಾನೋಪಮೇಯಗಳೆರಡನ್ನೂ ಹಿಡಿಯುವದಕ್ಕೂ, ಸಾದೃಶ್ಯದಿಂದ ಉಪಮಾನ ಪದಕ್ಕೆ ಅದರ ಸದೃಶವೆಂಬದಕ್ಕೂ ಗೌಣಿ ಯೆಂದು ಹೆಸರು.

ಪ್ರಯೋಗ:

ಬೆಂಕೆಯು ಈ ಹಾರ್ವನು.— ಇಲ್ಲಿ ಹಾರ್ವನಿಗೂ ಬೆಂಕೆಗೂ ಅಭೇದ ಕೂಡದಾದ್ದರಿಂದ ಬೆಂಕೆ ಪದಕ್ಕೆ ಬೆಂಕೆಗೆ ಸಮಾನವೆಂದು ಅರ್ಥವ ಮಾಡ ಬೇಕು.— ಇದು ಒಂದು ಗೌಣಿ ಲಕ್ಷಣೆ.

ಬೆಕ್ಕಿನಿಂದ: ಮೊಸರ ಕಾಯಿ!— ಇಲ್ಲಿ ಬೆಕ್ಕು ಬಾರದ ಹಾಗೆ ನೋಡಿಕೊಂಡು ಕಾಗೆ ಮೊದಲಾದವು ಬಂದರೆ ನೋಡಿ ಕೊಂಡು ಇರ ಹೇಳಿದ ಹಾಗಾಯಿತು. ಇಲ್ಲಿ ಮೊಸರ ಹೋಗಲಾಡಿಸುವ ವಸ್ತುವೆಲ್ಲಕ್ಕೂ ಹೋಗಲಾಡಿಸುವಿಕೆ ಯೆಂಬ ಸಮಾನಧರ್ಮ ವೊಂದಾದ್ದರಿಂದ ಅದನ್ನು ಹೋಗಲಾಡಿಸುವ ಕಾಗೆ ಮೊದಲಾದವೂ, ಬೆಕ್ಕೂ ಸಹ ಅರ್ಥವಾಗುತ್ತದೆ. ಇದು ಒಂದು ಗೌಣಿ ಲಕ್ಷಣೆ.—

## X. (POETICS) ಛಂದಸ್ಸುವಿವರ.

**Definition of poesy (poetry).**

**143.** ಪಾದ (ಚರಣ)–ಗಣ–ಯತಿ–ಮಾತ್ರೆ–ಪ್ರಾಸ ಮುಂತಾದ ನಿಯಮವುಳ್ಳದ್ದು ಅದೆ ಪದ್ಯ; ಆ ನಿಯಮ ವೊಂದಿಲ್ಲದ್ದು ಅದೆ ಗದ್ಯ (Prose) ಎಂದೆನಿಸುವದು.

**Of quantity.**

**144.** (Syllable) ಅಕ್ಷರ ಗುರುವೆಂತಲೂ ಲಘುವೆಂತಲೂ ಎರಡು ವಿಧವು.—ದೀರ್ಘಕ್ಕೂ, ಸಂಯುಕ್ತ ಪರವಾದ ಹ್ರಸ್ವಕ್ಕೂ, ವಿಸರ್ಗಾನುಸ್ವಾರ ಪರವಾದ ಹ್ರಸ್ವಕ್ಕೂ, ಸ್ವರಪರವಿಲ್ಲದ ವ್ಯಂಜನ ಪರವಾದ ಹ್ರಸ್ವಕ್ಕೂ, ಪದಾಂತ್ಯ ಹ್ರಸ್ವಕ್ಕೂ, ಗುರುವೆಂದು ಹೆಸರು; ಕಡಿಮೆಯಾದ ಹ್ರಸ್ವವೆಲ್ಲ ಲಘುವು.

ಪ್ರಯೋಗ:

ಗುರುವಿಗೆ: ದೀರ್ಘಕ್ಕೆ: ಆಂ–ಬಾಳ್–ಆಳ್–ಮಾ.
ದಡ್ಡಕ್ಷರಕ್ಕೆ (ಸಂಯುಕ್ತ): ವಜ್ರ–ಹದ್ದು–ಕಲ್ಪ.
ವಿಸರ್ಗಾನುಸ್ವಾರಕ್ಕೆ: ಅಂತಃಕರಣ–ಪ್ರಾತಃಕಾಲ–ಬಿಂದು–ಬಂದಂ.
ಸ್ವರಪರವಿಲ್ಲದ ವ್ಯಂಜನಪರವಾದ ಹ್ರಸ್ವಕ್ಕೆ: ಬಂದರ್–ಅಂಬುಗಳ್.
ಪದಾಂತ್ಯ ಹ್ರಸ್ವಕ್ಕೆ: ಖ್ಯಾತಿ ಗೌತಣಿಸಿ, ಬಂದರವೆಲ್ಲ.—ಇಲ್ಲಿ ಕಡೆ ಅಕ್ಷರ ಸ್ವಭಾವಿಕವಾಗಿ ಲಘುವಾಗಿದ್ದಾಗ್ಯೂ, ಪದಾಂತ್ಯದಲ್ಲಿ ಇರುವದರಿಂದ ಗುರುವಾಯಿತು.
ಲಘುವಿಗೆ: ಇರನು–ಮರಗಳು–ಬರಲು.

**Prosody.**

**145.** ಒಂದು ನುಡಿಯಷ್ಟು ಕಾಲವು ಮಾತ್ರೆ ಎಂದೆನಿಸುವದು. ಲಘ್ವಕ್ಷರಕ್ಕೆ ಒಂದು, ಗುರುವಕ್ಷರಕ್ಕೆ ಎರಡು, ಪ್ಲುತಕ್ಕೆ ಮೂರು ಮಾತ್ರೆಗಳು. ದೀರ್ಘವನ್ನು ಒಂದು ಮಾತ್ರೆ ಹೆಚ್ಚಾಗಿ ಯೆಳೆದು ಹೇಳಿದರೆ, ಅಥವಾ ಹ್ರಸ್ವವನ್ನು ಎರಡು ಮಾತ್ರೆ ಹೆಚ್ಚಾಗಿ ಎಳೆದು ಹೇಳಿದರೆ, ಅದು ಪ್ಲುತವು.

ಪ್ರಯೋಗ:

ಲಘುವಿಗೆ: ಬರಹ—ಇಲ್ಲಿ ಒಂದೊಂದು ಅಕ್ಷರಕ್ಕೆ ಒಂದು ಮಾತ್ರೆ.
ಗುರುವಿಗೆ: ಬಂದಂ—ಇಲ್ಲಿ ಒಂದೊಂದು ಅಕ್ಷರಕ್ಕೆ ಎರಡು ಮಾತ್ರೆ.—ಗೋಳಾಟಂ.
ಪ್ಲುತಕ್ಕೆ: ಬಾರೋ! ಇಲ್ಲಿ ಕಡೆ ಅಕ್ಷರ ಎಳೆದು ಹೇಳೋಣದರಿಂದ, ಪ್ಲುತವಾಯಿತು. ಈ ಶಬ್ದದಲ್ಲಿ 2+3=5 ಮಾತ್ರೆಗಳವೆ.

146. ಪದ ಓದಿ ಹೇಳುವಾಗ, ನುಡಿಯ ನಿಲ್ಲಿಸುವದೇ ಯತಿ (ವಿಶ್ರಮಣ ವಿರಾಮ). ಅದು ಎಲ್ಲಾ ಪದ್ಯದಲ್ಲಿ ಪದಾಂತ್ಯದಲ್ಲಿ ಇರುವದು. ಆದರೆ ದೊಡ್ಡ ವೃತ್ತಗಳಲ್ಲಿ ಪಾದದ ನಡುವೆ ಸಹ ನೇಮಿಸಿರುವ ಸ್ಥಾನಕ್ಕೆ ಅದು ಬರುವದು. Yati or pause

ಪ್ರಯೋಗ:

ಚಂಪಕಮಾಲಾವೃತ್ತಂ ॥

ಎನಲಿವರಿಂತು ಪೇೞ್ದುಶಿಯು ಯಂಮುಯುವೇದಪು ರಾಣಶಾಸ್ತ್ರದೋ
ಳನಿತಿರಲೆಂಮೊಳ್ಗಂ ತಿಳಿಪುದೆಂದು ವಿಪ್ರರೆನಲೆಲ್ಲರಿಂಗೆ ತಾ
ಮನಮುದದಿಂದೆ ಸೂಚಿಪ ಪೊಲಂತೆದನಾಗಳೆ ಶೀಘ್ರ ಖೇಚರಾ
ವನಿಪತಿ ಪೇಳಲುಜ್ಜುಗಿಶಿದಂ, ಸಭೆ ಬಾಪುರೆ ಭಾಪೆನಿಪ್ಪಿನಿಂ.

ಈ ಚಂಪಕಮಾಲಾವೃತ್ತದಲ್ಲಿ ಯತಿ ಹದಿಮೂರನೆ ಸ್ಥಾನಕ್ಕೆ ಬರುವದು.

147. ಕರ್ಣಾಟಕ ಭಾಷೆಯ ಕಾವ್ಯಗಳಲ್ಲಿ ಪ್ರಾಸವಿರ ಬೇಕು; ಪ್ರಾಸವೆಂದರೆ, ಒಂದೊಂದು ಚರಣದ ಎರಡನೇ ಸ್ಥಾನದಲ್ಲಿ ಅದೇ ಅಕ್ಷರ ಬರುತ್ತಿರ ಬೇಕು; ಪ್ರಾಸವು ವರಣ ಭೇದದಿಂದ ಆರು ಪ್ರಕಾರವಾಗುವದು; ಇದಲ್ಲದೆ ವಿನುತಪ್ರಾಸ, ಶಾಂತಪ್ರಾಸ, ವರ್ಗಪ್ರಾಸ, ಸಮೀಪಪ್ರಾಸ, ಅನುಗತಪ್ರಾಸ, ಅಂತ್ಯಪ್ರಾಸವೆಂದು ಪ್ರಾಸ ಆರು ವಿಧವು.—ಒಂದು ಪದ Alliteration (ಪ್ರಾಸ) Rhyme.

ದ ಮೊದಲನೆ ಚರಣದ ಮೊದಲನೆ ಅಕ್ಷರ ಗುರುವಾದರೆ, ಮಿಕ್ಕ ಎಲ್ಲಾ ಚರಣಗಳ ಮೊದಲನೆ ಅಕ್ಷರಗಳು ಗುರುವೇ ಇರ ಬೇಕು; ಹಾಗೆ ಲಘು ವಿದ್ದರೆ ಲಘುವೇ ಇರ ಬೇಕು.

ಪ್ರಯೋಗ:

ಷಡ್ಪ್ರಾಸಮಾಲೆ.

| ಅಂಕೆ. | ನಾಮ. | ಉದಾಹರಣೆ. | ಫಲ. |
|---|---|---|---|
| 1.) | ಸಿಂಹಪ್ರಾಸ. | ಶರಧಿ<br>ಕರುಣಿ<br>ಮರಿ | ಅತಿವಿಭವ. |
| 2). | ಗಜಪ್ರಾಸ. | ಲೋಕಾಪವಾದ<br>ಪ್ರಾಣೇಶ | ರಾಜ್ಯಲಾಭ. |
| 3.) | ವೃಷಭಪ್ರಾಸ. | ಅಂನೆಗಂ<br>ಮಂನಿಸುತ | ಸಂಪತ್ತು. |
| 4.) | ಶರಭಪ್ರಾಸ. | ಕೂರ್ಗಣೆ<br>ಕಾರ್ಗಾಲಿ | ಸಿರಿ. |
| 5.) | ಅಜಪ್ರಾಸ. | ದುಃಖ<br>ದುಃಕುಲ | ಭಂಗ. |
| 6.) | ಅಶ್ವಪ್ರಾಸ. | ನೆತ್ತರು<br>ಕತ್ತರಿಸು | ಜಯ. |

ವಿನುತಪ್ರಾಸಕ್ಕೆ: ಪರಕಿಯ
ಕೊರಳ್ಗೊಳ್ಳು

ಶಾಂತಪ್ರಾಸಕ್ಕೆ: ಪಾವನತರಸುಸ್ವರೂಪನ್ರ
ಪಾವನತವರಪದಕಮಲ, ನಿ
ಷ್ಪಾವನಾತ್ಮಾಧಿಪಗೆ ವಾಹನವಾಗಿ ಶೋಭಿಸುವಾ
ಪಾವನತಿ ಬಲದಿಂದ ತುಳಿದುರೆ
ಪಾವನವ ಮಾಡಿದನು ನರನ, ಕ್ರ
ಪಾವನಧಿ ದೃಕ್ಪ್ರಭೆಯಮಿಂಕತ್ತಲನು ಪರಿಹರಿಸೀ!

ಅನ್ವಯ: ಪಾವನತರ–ಕಮಲ=ಕಮಲವುಳ್ಳಾತನು ನಿಷ್ಪಾವನಾತ್ಮಾಧಿಪಗೆ–ಪಾವಂ–ತುಳಿದುರೆ ನರನ ಪಾವನ ಮಾಡಿದನು.

ಆದರೆ ಪ್ರಾಸಸ್ಥಾನದ ಶಬ್ದಗಳಿಗೆ ಭಿನ್ನಾಭಿಪ್ರಾಯವಿರ ಬೇಕು.

ವರ್ಗಪ್ರಾಸಕ್ಕೂ, ಅಂತ್ಯಪ್ರಾಸಕ್ಕೂ: ಸಕಲ ಭುವನ ಪೂಜಿಪಾತನಂ
ಮುಖವ ನಡಿಸಿ ರಕ್ಷಿಪಾತನಂ
ಅಗದ ತೆರದಿ ನಿಲ್ಲುವಾತನಂ
ಅಘವಿಘಟನ ಜಾಡಿರಾತನಂ!

ಸಮೀಪಪ್ರಾಸಕ್ಕೆ: ಮತ್ತೆ.

ಇದರ ಉತ್ತರ: ಕುಶಲರ್ಗೆಂಧಕರಿಂಗೆ ಯಾವುದಭಿಲಾಷಂ? ಪಾರ್ವರಿಂಗೆಮಧು
ನಯ ನಯನ ವಿಷಯಾಸಕ್ತಿ ಗಣಕ್ಕೆದೇನ ನಡೆ ನೋಡಲ್ಪ್ರೀತೆ? ಈ ಪ್ರಶ್ನೆಗಂ
ಜಲ ಜಲಜ ನೊಸ ದ್ಕೈದೆಲಘುವಾದ ಉತ್ತರಮ ಲೋಮಾಲೋಮದಿಂದೋದುವೋ
ಉಸುರಲ್ಬಲ್ಲರೆವಂದಿರೆ ರಶಿಕರೆಂದಾಂ ಭಾವಿಪೇಂ ಸರ್ವದಾ.

ಅನುಗತಪ್ರಾಸಕ್ಕೆ: ದಿನ ದಿನದೊಳ್.
ಮನಮನದೊಳ್ (ಜೈಮಿನಿ. 6, 2.)

148. ಕನ್ನಡದಲ್ಲಿಯೂ ಎಂಟು ಗಣಗಳು ವ್ಯವಹರಿಸುವವು. ಅವುಗಳ ವಿವರವ ಕೆಳಗೆ ಬರೆದಿರುವ ಅಷ್ಟಗಣ ಮಾಲೆಯಲ್ಲಿ ನೋಡ ತಕ್ಕ

Eight feet of three syllables.

ದ್ದು.—ಈ ಅಷ್ಟಗಣವಲ್ಲದೆ 2 ಮತ್ತು 3 ಅಕ್ಷರವುಳ್ಳ 4 ಬ್ರಹ್ಮಗಣಗಳೂ, 3 ಮತ್ತು 4 ಅಕ್ಷರವುಳ್ಳ 8 ವಿಷ್ಣುಗಣಗಳೂ, 4 ಮತ್ತು 5 ಅಕ್ಷರವುಳ್ಳ 16 ರುದ್ರಗಣಗಳೂ ವರ್ತಿಸುವವು. ಇವುಗಳೊಳಗೆ ಆ ಅಷ್ಟಗಣ ಬಂದ ಹಾಗಾಯಿತು. ಆದರೆ ಇವುಗಳ ಪ್ರಯೋಗ ಪ್ರಸಿದ್ಧವಲ್ಲ.

---

## ಅಷ್ಟಗಣ ಮಾಲೆ.

| ಅಂಕಿ. | ಪ್ರಸ್ತಾರ. | ಗಣನಾಮ. | ಸಂಜ್ಞಾಕ್ಷರ. | ಉದಾಹರಣೆ. | ಪ್ರಯೋಗ. |
|---|---|---|---|---|---|
| 1.) | ——— | ಧರಣಿ | ಮ. | ಶ್ರೀಶೈಲಂ | ಪೀಠಿಕಾಶೀರ್ವಾದಗಳಲ್ಲಿ |
| 2.) | ∪—— | ಜಲ | ಯ | ಪ್ರವಾಹಂ | ಯುದ್ಧ ಜಯವರ್ಣನೆಯಲ್ಲಿ |
| 3.) | —∪— | ಅಗ್ನಿ | ರ | ವಾರಿಜಂ | ಶೌರ್ಯಕ್ರೋಧವರ್ಣನೆಯಲ್ಲಿ |
| 4.) | ∪∪— | ಮರುತ | ಸ | ವನಜಂ | ರೋಗಚಿಂತಾವರ್ಣನೆಯಲ್ಲಿ |
| 5.) | ——∪ | ವ್ಯೋಮ | ತ | ಆಕಾಶ | ದೇಶೋಪದ್ರವರ್ಣನೆಯಲ್ಲಿ |
| 6.) | ∪—∪ | ರವಿ | ಜ | ಅಧೈರ್ಯ | ರಗಣದ ಪ್ರಕಾರ |
| 7.) | —∪∪ | ಶಶಾಂಕ | ಭ | ಆಗುವ | ಸಂತೋಷೋತ್ಸವವರ್ಣನೆಯಲ್ಲಿ |
| 8.) | ∪∪∪ | ಸ್ವರ್ಗ | ನ. | ಗಗನ | ಕ್ರೀಡಾದಿವಿಲಾಸವರ್ಣನೆಯಲ್ಲಿ |

2 = – ಗುರುಚಿನ್ಹೆ.

। = ∪ ಲಘು ಚಿನ್ಹೆ.

ಈ ಅಷ್ಟಗಣಗಳೂ ಗುರುಲಘ್ವಕ್ಷರಗಳೂ ಕೂಡಿ 26 ಅಕ್ಷರಗಳಾಗುತ್ತವೆ. ಈ ಅಕ್ಷರಗಳಿಂದ ಏಕೋತ್ತರ ವೃದ್ಧಿನೇಮದ ಪ್ರಕಾರ ಒಂದು ಅಕ್ಷರದ ಪಾದವುಳ್ಳ ಉಕ್ತಿ ಮೊದಲಾದ 26 ಛಂದಸ್ಸುಗಳು ಹುಟ್ಟುತ್ತವೆ. 1ನೆ ಛಂದಸ್ಸಿನಿಂದ 2, 2ನೇದರಿಂದ 4, 3ನೆದರಿಂದ 8 ಈ ಪ್ರಕಾರ ಕ್ರಮದಿಂದ ಇಮ್ಮಡಿಯಾಗಿ ಬೇರೆ ಬೇರೆ ವೃತ್ತಗಳು ಆಗುತ್ತವೆ. ಒಂದೊಂದು ವೃತ್ತಕ್ಕೆ ನಾಲ್ಕು ಸಮ ಪಾದಗಳು (ಚರಣಗಳು) ಅವೆ.

ಪ್ರಸಿದ್ಧವಾದ ಕೆಲವು ವೃತ್ತಗಳು ಯಾವವೆಂದರೆ:

1.) ಏಳು ಅಕ್ಷರ ಪಾದವುಳ್ಳ ಉಷ್ಟುಪ್ ಛಂದಸ್ಸಿನ ವಿಭೂತಿ ವೃತ್ತ: –∪–|∪–∪|–

2.) ಹನ್ನೊಂದು ಅಕ್ಷರದ ಪಾದವುಳ್ಳ ತ್ರಿಷ್ಟುಪ್ ಛಂದಸ್ಸು:
   ಅ.) ಇಂದ್ರವಜ್ರವೃತ್ತ: ––∪|––∪|∪–∪|––
   ಬ.) ರತೊದ್ಧತವೃತ್ತ: –∪–|∪∪∪|–∪–|∪–
   ಚ.) ಸ್ವಾಗತವೃತ್ತ: –∪–|∪∪∪|–∪∪|––

3.) ಹನ್ನೆರಡು ಅಕ್ಷರದ ಪಾದವುಳ್ಳ ಜಗತಿ ಛಂದಸ್ಸು:
   ಅ.) ವಂಶಸ್ಥವೃತ್ತ: ∪–∪|––∪|∪–∪|–∪–|
   ಬ.) ಧೃತವಿಲಂಬಿತವೃತ್ತ: ∪∪∪|–∪∪|∪–∪|–∪–|

4.) ಹದಿನಾಲ್ಕು ಅಕ್ಷರದ ಪಾದವುಳ್ಳ ಶಾಕ್ವರಿಛಂದಸ್ಸಿನ ವಸಂತತಿಲಕ ವೃತ್ತ: ––∪|–∪∪|∪–∪|∪–∪|––

5.) ಹದಿನೈದು ಅಕ್ಷರದ ಪಾದವುಳ್ಳ ಅತಿಶಾಕ್ವರಿ ಛಂದಸ್ಸು:
   ಅ.) ಮಾಲಿನಿವೃತ್ತ: ∪∪∪|∪∪∪|–––|∪––|∪––|
   ಬ.) ಕಳಾಭಾಷಣವೃತ್ತ: –∪–|∪∪∪|–∪∪|–∪∪|–∪–|

6.) ಹತ್ತೊಂಭತ್ತು ಅಕ್ಷರದ ಪಾದವುಳ್ಳ ಅತಿಧೃತಿ ಛಂದಸ್ಸು:

ಅ.) ತರಳವೃತ್ತ: ∪∪∪|–∪∪|–∪–|∪∪–|∪–∪|∪–∪|–

ಬ.) ಶಾರ್ದೂಲ ವಿಕ್ರೀಡಿತ ವೃತ್ತ:

– – –|∪∪–|∪–∪|∪∪–|– –∪|– –∪|–

7.) ಇಪ್ಪತ್ತು ಅಕ್ಷರದ ಪಾದವುಳ್ಳ ಕೃತಿಛಂದಸ್ಸು:

ಅ.) ಮತ್ತೇಭವಿಕ್ರೀಡಿತವೃತ್ತ:

∪∪–|–∪∪|–∪–|∪∪∪|– – –|∪– –|∪–

ಬ.) ಉತ್ಪಲಮಾಲಿಕಾವೃತ್ತ:

–∪∪|–∪–|∪∪∪|–∪∪|–∪∪|–∪–|∪–

8.) ಇಪ್ಪತ್ತೊಂದು ಅಕ್ಷರದ ಪಾದವುಳ್ಳ ಪ್ರಕೃತಿ ಛಂದಸ್ಸು:

ಅ.) ಶ್ರಗ್ಧರವೃತ್ತ: – – –|–∪–|–∪∪|∪∪∪|∪– –|∪– –|∪– –|

ಬ.) ಚಂಪಕಮಾಲಾವೃತ್ತ:

∪∪∪|∪–∪|–∪∪|∪–∪|∪–∪|∪–∪|–∪–|

9.) ಇಪ್ಪತ್ತೆರಡು ಅಕ್ಷರದ ಪಾದವುಳ್ಳ ಆಕೃತಿ ಛಂದಸ್ಸಿನ ಮಹಾ ಶ್ರಗ್ಧರ ವೃತ್ತ: ∪∪–|– –∪|– –∪|∪∪∪|∪∪–|–∪–|–∪–|–

10.) ಇಪ್ಪತ್ತೆಂಟು ಅಕ್ಷರದ ಪಾದವುಳ್ಳ ಮಾಲಾವೃತ್ತವು 26 ಛಂದಸ್ಸುಗಳೊಳಗಣದಲ್ಲ; ಆದರೂ ಗಣನಿಬಂಧನೆಯಿಂದ ಉಳಿದ ವೃತ್ತಗಳಂತೆ ಹುಟ್ಟುತ್ತದೆ:

∪∪∪|–∪∪|∪–∪|∪–∪|–∪–|∪∪–|∪–∪|– –∪|– –∪|–

Anustub Shloka.

149. ಅನುಷ್ಟುಪ್ ಶ್ಲೋಕದ ವಿವರವು ಹ್ಯಾಗಂದರೆ: ಒಂದೊಂದು ಚರಣದ ಆರಂಭದಲ್ಲಿ ಹ್ರಸ್ವವಾಗಲಿ ದೀರ್ಘವಾಗಲಿ ನಾಲ್ಕು ಅಕ್ಷರಗಳು ಬಂದ ಮೇಲೆ, 1ನೆ ಹಾಗು 3ನೆ ಚರಣದಲ್ಲಿ ಒಂದು ಯಗಣ, 2ನೆ ಹಾಗು 4ನೆ ಚರಣದಲ್ಲಿ ಒಂದು ಜಗಣ ಬರ ಬೇಕು; ನಾಲ್ಕು ಚರಣಗಳ ಅಂತ್ಯಾಕ್ಷರ ಗುರುವಿರ ಬೇಕು. ಈ ಅನುಷ್ಟುಪ್ ಶ್ಲೋಕ ವಿಷಮ ವೃತ್ತಗಳೊಳಗಣದು.

ಪ್ರಸ್ತಾರ: – ∪ – ∪ | ∪ – – | –
– – – ∪ | ∪ – ∪ | –
– – – ∪ | ∪ – – | –
∪ – – ∪ | ∪ – ∪ | –

Lighter kinds of verses.

150. ವರ್ಣಕ ಪದ್ಯಗಳು ಗಣನೇಮವಿಲ್ಲದೆ ಮಾತ್ರೆಗಣನೆಯಿಂದ ಆಗುತ್ತವೆ:

1.) ಉತ್ಸಹವೃತ್ತದ ಒಂದೊಂದು ಚರಣಕ್ಕೆ 23 ಮಾತ್ರೆಗಳಿರ ಬೇಕು; ಇಲ್ಲವೆ –∪ ಅಥವಾ ∪∪∪ ಈ ಎರಡು ತರದ ಬ್ರಹ್ಮಗಣಗಳಲ್ಲಿ ಏಳು ತಕ್ಕೊಂಡು ಕಡೆಗೆ ಒಂದು ದೀರ್ಘಾಕ್ಷರವಿಡ ಬೇಕು.

ಪ್ರಸ್ತಾರ: –∪ | –∪ | –∪ | –∪ | –∪ | –∪ | –∪ | – ಅಥವಾ
–∪ | –∪ | ∪∪∪ | ∪∪∪ | ∪∪∪ | ∪∪∪ | –∪ | –

2.) ತ್ರಿಪದಿಯ 1ನೆ ಚರಣಕ್ಕೆ 20, 2ನೆ ಚರಣಕ್ಕೆ 17, 3ನೇದಕ್ಕೆ 13 ಮಾತ್ರೆಗಳಿರ ಬೇಕು; ಒಂದನೆ ಚರಣದಲ್ಲಿ 10 ಮಾತ್ರೆಗಳು ಆದ ಮೇಲೆ, ಮತ್ತು ಅದೇ ಪ್ರಾಸ ಬರ ಬೇಕು.

ಪ್ರಸ್ತಾರ: – – ∪∪∪ – ∪ | – – ∪∪∪ – ∪
– – ∪ – ∪∪∪ – ∪∪∪∪∪
– ∪∪∪ – ∪ – – ∪

3.) ಲಲಿತರಗಳೆಗೆ 2 ಚರಣಗಳು ಮಾತ್ರ ಅವೆ. ಒಂದೊಂದು ಚರಣಕ್ಕೆ 20 ಮಾತ್ರೆಗಳಿರ ಬೇಕು.—ಮತ್ತೊಂದು ತರದ ಲಲಿತರಗಳೆ ಉಂಟು. ಹ್ಯಾಗಂದರೆ: 15 ಅಕ್ಷರವುಳ್ಳ ಅತಿ ಶಾಕ್ವರಿಛಂದಸ್ಸಿನ ಲಲಿತವೃತ್ತವೇ ಮಾತ್ರಾರೂಪವಾಗಿ ಲಲಿತರಗಳೆ ಆಗೆದೆ.

ಲಲಿತವೃತ್ತದ ಪ್ರಸ್ತಾರ: ∪∪∪ | ∪∪ – | ∪∪∪ | – ∪∪ | ∪ – – ಇದರಲ್ಲಿ 19 ಮಾತ್ರೆಗಳು ಅವೆ.

ಲಲಿತರಗಳೆಯ ಪ್ರಸ್ತಾರ: –ᴗ– –ᴗᴗᴗ– –ᴗᴗᴗ– 19
– –ᴗᴗᴗ–ᴗ– –ᴗᴗᴗ– 19

4.) ಕಂದಲಕ್ಷಣ: ಚರಣ ನಾಲ್ಕು; 1ನೆ, 3ನೆ ಚರಣಕ್ಕೆ 12 ಮಾತ್ರೆ, 2ನೆ 4ನೆ ಚರಣಕ್ಕೆ 20 ಮಾತ್ರೆಗಳಿರ ಬೇಕು.

ಪ್ರಸ್ತಾರ: –ᴗ– –ᴗᴗᴗ– 12 ಮಾತ್ರೆ
– –ᴗᴗᴗᴗᴗᴗᴗᴗᴗᴗ– – 20
–ᴗᴗ–ᴗᴗᴗᴗᴗᴗ 12
–ᴗᴗᴗᴗ– –ᴗᴗ– – – – 20

5.) ಷಟ್ಪದಿಗಳು ಅಂದರೆ ಆರು ಚರಣಗಳುಳ್ಳ ಪದ್ಯವು. ಇವು ಆರು ವಿಧವು:

ಅ.) ಶರಷಟ್ಪದಿ: 1, 2, 4, 5ನೆ ಚರಣಗಳ ಒಂದೊಂದರಲ್ಲಿ 8 ಮಾತ್ರೆ ಇರ ಬೇಕು; 3, 6ನೆ ಚರಣಗಳ ಒಂದೊಂದರಲ್ಲಿ 14 ಮಾತ್ರೆಗಳಿರ ಬೇಕು.

ಮೆರವೆರಸಡಿ|ಯುತ್
ಶರಚೆರಸಡಿಯೊಳ್
ಕರಿಲಘುಗಳ್ಮೂರಾರನೆಯಾ
ಚರಣದಿ|ಮನುವಿಂ
ತೆರವತ್ತು ಲಘುವು
ಶರಷಟ್ಪದಿಗಂ ಬುಜನಯನೇ!

1.) ಆನೆ, ಎಂಟು ದಿಗಾನೆಗಳಿರುವದರಿಂದ ಈ ಶಬ್ದ ಎಂಟಕ್ಕೆ ಸಂಜ್ಞೆ. 2.) ಹದಿನಾಲ್ಕು ಮನುಗಳಿರುವ ಕಾರಣ, ಇದು ಹದಿನಾಲ್ಕಕ್ಕೆ ಸಂಜ್ಞೆ. ನಾಗವರ್ಮಕವಿ ಛಂದಸ್ಸು ತನ್ನ ಹೆಂಡತಿಗೆ ಹೇಳುತ್ತಾನೆ.

| | | |
|---|---|---|
| ಪ್ರಸ್ತಾರ: | ∪∪∪∪∪∪-- | 8 ಮಾತ್ರೆ. |
| | ∪∪∪∪∪∪– | 8 |
| | ∪∪∪∪–––∪∪– | 14 |
| | ∪∪∪∪∪∪– | 8 |
| | ∪∪–∪∪∪∪ | 8 |
| | ∪∪–∪∪–∪∪∪∪– | 14 |
| | | 60 |

## ಬ.) ಕುಸುಮಷಟ್ಪದಿ:

ಮೊಸೆಯೆ|ಮೊದಲೆರಡು ನಾಲ್–
ಕೆಸೆವೈದನೆಯ ಪದದಿ
ದಶದಶಮಾತ್ರೆ|ಮೂರಾರನೆಯೊಳೂ
ಮಿಸುಪಪದಿನೇಳು ಲಘು
ರಸೆಗೆಪ್ಪತ್ತುನಾಲ್ಕು

ಕುಸುಮಷಟ್ಪದಿಗೆ, ಪಂಕಜಲೋಚನೇ!

| | | |
|---|---|---|
| ಪ್ರಸ್ತಾರ: | ∪∪∪∪∪∪∪∪– | 10 |
| | ∪∪–∪∪∪∪∪∪ | 10 |
| | ∪∪∪––∪––∪∪∪– | 17 |
| | ∪∪∪∪∪–∪∪∪ | 10 |
| | ∪∪––∪–∪ | 10 |
| | ∪∪∪–∪∪∪–∪∪–∪– | 17 |
| | | 74 |

### ಚ.) ಭೋಗಷಟ್ಪದಿ:

ಪೊಳೆವ|ಮೊದಲಿನೆರಡು ಪದದಿ
ಬಳಿಕ|ಚರಮದೆರಡುಯಡಿಗೆ
ಕಳೆಗಳರ್ಕ ಸಂಖ್ಯೆಯಾರು ಮೂರಣಂಘ್ರಿಗೇ
ತಿಳಿಯಲಿಪ್ಪತ್ತೆಂತು
ಕಳೆಗಳೆಂಭತ್ತೆಂಟರಿಂ
ಕಲಿತವಾಗಲೊಡನೆ ನರನೆ! ಭೋಗಷಟ್ಪದೀ

1.) ಕಡೆ. 2.) ಮಾತ್ರೆಗಳು. 3.) ಸೂರ್ಯ. ಈ ಶಬ್ದ ಹನ್ನೆರಡಕ್ಕೆ ಸಂಜ್ಞೆ.

| | | |
|---|---|---|
| ಪ್ರಸ್ತಾರ: | ᴗᴗᴗᴗᴗᴗᴗᴗᴗᴗᴗᴗ | 12 |
| | ᴗᴗᴗᴗᴗᴗᴗᴗᴗᴗᴗᴗ | 12 |
| | ᴗᴗᴗ–ᴗ–ᴗ–ᴗ–ᴗ–ᴗ– | 20 |
| | ᴗᴗᴗ– – – –ᴗ | 12 |
| | ᴗᴗᴗ– – –ᴗ– | 12 |
| | ᴗᴗᴗ–ᴗᴗᴗᴗᴗᴗᴗ–ᴗ–ᴗ– | 20 |
| | | 88 |

### ದ.) ಭಾಮಿನಿಷಟ್ಪದಿ:

ಮೊದಲೆರಡು ನಾಲ್ಕೈದೆನಿಪ|ಸತ್
ಪದದಿ|ಮನುಸಂಖ್ಯಾಂಕ ಮಾತ್ರೆಯು
ತುದಿಯ ಮೂರಾರನೆಯೊಳಿಪ್ಪತ್ತ್ಮೂರು ಮಾತ್ರೆಗಳೊ
ಪೊದವಿದೀಪರಿ|ಯಾರುಪಾದಕೆ
ಪುದಿದ|ಮಾತ್ರೆಯು|ನೂರೆರಡು; ಕೇ
ಳಿದುವೆ ಭಾಮಿನಿ|ಯೆಂದೆನಿಪ|ಷಟ್ಪದಿಯ|ಲಕ್ಷಣವೊ.

ಪ್ರಸ್ತಾರ: ∪∪∪|∪∪–|–∪|∪∪–| 14
∪∪∪|∪∪–|–∪|–∪∪| 14
∪∪∪|––|∪∪∪|––|–∪|–∪∪|– 23
∪∪∪|–∪∪|–∪|–∪∪| 14
∪∪∪|–∪∪|–∪|∪∪–| 14
∪∪∪|–∪∪|–∪|∪∪–|∪∪∪|–∪∪|– 23
102

## ಎ.) ಪರಿವರ್ಧಿನಿಯಷಟ್ಪದಿ:

ಪಾದಗಳೆರಡರೊಳುತ್ತರದೆರಡುಂ|
ಪಾದದಿ|ಷೋಡಶ ಷೋಡಶ ಮಾತ್ರೆಯು;
ಭೇದಿಸಿ|ಮೂರನೆಯಾರನೆಯಡಿಯೊಳ್ಲಘುವಿಪ್ಪತ್ತಾರೂ;
ಸಾದರವಿಂತೆರಡಿಯೊಳ್ಗಣಿಯಿಸೆ,
ಶೋಧಿತಲಘು|ನೂರಾಪದಿನಾರೆಲೆ
ಕಾದಲೆ! ಕೇಳಿಂತಿದು|ನಿಶ್ಚಯ|ಪರಿವರ್ಧಿನಿ ಷಟ್ಪದಿಗೇ.

ಪ್ರಸ್ತಾರ: –∪∪|∪∪∪∪|–∪∪|∪∪–| 16
–∪∪|–∪∪|–∪∪|–∪∪| 16
–∪∪|–∪∪|–∪∪|∪∪–|∪∪–|––|– 26
–∪∪|––|∪∪–|∪∪∪∪| 16
–∪∪|∪∪–|–∪∪|–∪∪| 16
–∪∪|––|∪∪–|∪∪∪∪|–∪∪|–∪∪|– 26
116

## ಫ.) ವಾರ್ಧಿಕಷಟ್ಪದಿ:

ಲೀಲೆಯಿಂ|ವಾರ್ಧಿಕಷಟ್ಪದಿಯ|ಮೊದಲ ಪದ
ದೇಳಿಗೆಯುಮಿಪ್ಪತ್ತು ಮಾತ್ರೆಯಿಂದೆಸದಿರ್ಕ್ಕ
ಮೊಲಲಿತಮೆನಿಪ|ಮೂರಾರನೆಯ|ಪಾದಗಳ್ಮೂವತ್ತೆರಡು ಮಾತ್ರೆಯೂ
ಮೇಳೆನೆ, ವಿರಾಜಿಸುಗುಮಿಂತಾರು ಪಾದಂಗ
ಳೊಲಿಸಲ್ಮಾತ್ರೆಗಳ್ನೂರ ನಾಲ್ವತ್ತರಿಂ
ಮೇಲೆ ನಾಲ್ಕೆಸದವೈ, ಛಂದೋಂಬುರಾಶಿಯೊಳ್ನೀ|ಕೇಳ್ಪುದಿಂದುವದನೇ!

ಪ್ರಸ್ತಾರ: –∪–|––∪|–∪∪∪|∪∪∪∪∪| 20
–∪∪∪|––∪|–∪–|∪∪–∪| 20
–∪∪∪|∪∪∪–|–∪∪∪|–∪–|––∪|∪∪–∪|– 32
–∪∪∪|–∪∪∪|––∪|––∪| 20
–∪–|–∪–|–∪–|–∪–| 20
–∪–|∪∪∪–|––∪|–∪–|––∪|–∪∪∪|– 32
144



A SHORT

# GRAMMAR

OF THE

ANCIENT DIALECT

OF THE

# CANARESE LANGUAGE

PREPARED BY ORDER OF THE DIRECTOR OF PUBLIC INSTRUCTION.

ಹಳೆ ಕನ್ನಡದ

ಸಂಕ್ಷೇಪ

# ವ್ಯಾಕರಣ ಸೂತ್ರಗಳು.

MANGALORE:
PRINTED BY PLEBST & STOLZ, BASEL MISSION PRESS.
1866.



